ಶ್ರೀ

ಶ್ರೀ ಶಂಕರ ಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಶಿವಾನಂದಲಹರಿ

ಎಂಬ

ಈ ಪರಮೇಶ್ವರ ಸ್ತೋತ್ರಶತಕವು

## ಶ್ರೀ ಭಾಷ್ಯಂ ತಿರುಮಲಾಚಾರ್ಯರಿಂದ

ಕನ್ನಡ ಭಾಷೆಯೊಳು ಪ್ರತಿಪದಾರ್ಥ ಭಾವಾರ್ಥಗಳೊಡನೆ ಟೀಕಿಸಲ್ಪಟ್ಟು

ಪರಿಷ್ಕರಿಸಲ್ಪಟ್ಟಿದೆ.

ಮೂರನೇ ಮುದ್ರಣ.

ಬೆಂಗಳೂರು

ಎಚ್. ಎಸ್. ರಾವು ಅಂಡ್ ಬ್ರದರ್ಸು ಯವರಿಂದ

ಪ್ರಕಟಿಸಲ್ಪಟ್ಟಿತು.

೧೯೨೫.



PRICE 0-8-0.

## ಮೂರನೇ ಮುದ್ರಣದ ಪ್ರಕಟನೆ.

ಈ ಶಿವಾನಂದಲಹರೀ ಸ್ತೋತ್ರದ ಮೊದಲು ಎರಡು ಮುದ್ರಣಗಳ ಪ್ರತಿಗಳು ಮುಗಿದು ಅವು ದುರ್ಲಭವಾಗಿದ್ದವು. ಅನೇಕ ಕಾರಣಗಳಿಂದ ಮರಳಿ ಮುದ್ರಿಸಲು ಇದುವರೆಗೂ ಸಾಧ್ಯವಾಗಲಿಲ್ಲ. ಈಗ ಈ ಸ್ತೋತ್ರವನ್ನು ಮುದ್ರಿಸಿ ಪ್ರಕಟಿಸುವ ಭಾರವನ್ನು ತಾವು ವಹಿಸಿದ ಉಪಕಾರಕ್ಕಾಗಿ ಮ|| ರಾ|| ಎಚ್. ಎಲ್. ರಾವು ಬ್ರದರ್ಸ್‌ಗಳಿಗೆ ನಾನು ಕೃತಜ್ಞನಾಗಿದ್ದೇನೆ. ಕೂಡಿದ ಮಟ್ಟಿಗೂ ಗ್ರಂಥವು ಶುದ್ಧವಾಗಿರಬೇಕೆಂದು ಪ್ರಯತ್ನಪಟ್ಟಿದೆ. ಪ್ರಮಾದ ವಶದಿಂದ ಮತ್ತು ಕನ್ನಡ ಅಕ್ಷರ ಮುದ್ರಾಶಾಲೆಗಳ ಈಗಿನ ಸ್ಥಿತಿಯಲ್ಲಿ ಅಶುದ್ಧಗಳು ಇರುವುದು ಸಾಧ್ಯವೇ. ಅಂಥವನ್ನು ವಾಚಕ ಮಹಾಶಯರು ಉದಾರಮನಸ್ಸಿನಿಂದ ಕ್ಷಮಿಸಿ ಈ ಪ್ರಯತ್ನಕ್ಕೆ ಪ್ರೋತ್ಸಾಹ ಕೊಡುವರೆಂದು ನಂಬಿ ಇದೆ.

ಬೆಂಗಳೂರು,<br>೧೩ ನವಂಬರು ೧೯೨೫.

ಇತಿ,<br>ಭಾಷ್ಯಂ ರಾಮಾಚಾರ್ಯ.

## ಮೊದಲನೇ ಛಾಪೆಯ ಪೀಠಿಕೆ.

ಈ ಶ್ಲಾಘ್ಯವಾದ ಸ್ತೋತ್ರವು ಇತರ ಅನೇಕ ಸ್ತೋತ್ರಗಳಂತೆ ಇರದೇ ಶಬ್ದಾಲಂಕಾರ ಅರ್ಥಾಲಂಕಾರ ಭಾವರಸಗಳೊಡನೆ ಕೂಡಿ ಭಕ್ತ ಜನರಿಗೆ ಬಹಳ ಮನೋರಂಜಕವಾಗಿರುತ್ತೆ. ಇಂತಹ ಉತ್ತಮಕಾವ್ಯದ ಅರ್ಥವು ಓದುವವರ ಮನಸ್ಸಿಗೆ ವಿಶದವಾಗಿ ತಿಳಿದು ಸ್ತೋತ್ರಪಾಠದ ಫಲವು ಸಂಪೂರ್ಣವಾಗಿ ಪಾಠಕರಿಗೆ ದೊರೆಯಲೆಂದು ಇದನ್ನು ಪ್ರತಿಪದಾರ್ಥ ಭಾವಾರ್ಥಗಳೊಡನೆ ಪ್ರಕಟಿಸಿದೆ. ಇದನ್ನು ವಾಚಕರು ಸಾದರದಿಂದ ಪರಿಗ್ರಹಿಸಿದರೆ ನನ್ನ ಶ್ರಮವು ಸಾರ್ಥಕವಾಗುವುದು.

೧೮೭೨ ನೇ ಇಸವಿ,<br>ಬೆಂಗಳೂರು.

ದೀಕ್ಷಿತ ಭಾ. ತಿರುಮಲಾಚಾರ್ಯ,

# ಶ್ಲೋಕಗಳ ಅಕಾರಾದಿ ಸೂಚಿಕೆ.

# ಅಶುದ್ಧ ಶೋಧನ.

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೧ | ೪ | ಪುನರ್ಭವಾಭ್ಯಾಂವಮಾನಂದ | ಪುನರ್ಭವಾಭ್ಯಾವಮಾನಂದ |
| ,, | ೧೪ | ಸ್ವಕೀಯಳಾದ ... ... ... | ಸ್ವಕೀಯಗಳಾದ |
| ೨ | ೨೦ | ಕುಲುವೆ ... ... ... | ಕಾಲುವೆ |
| ೪ | ೪ | ಅಪರಿಛಿನ್ನವಾದ ... ... ... | ಅಪರಿಚ್ಛಿನ್ನವಾದ |
| ೭ | ೭ | ವಹಿಸಿ ... ... ... | ವಹಸಿ |
| ೮ | ೧ | ವೃಥಾ ಇತ್ಯಾದಿ ವ್ಯಾಖ್ಯವನ್ನು ೭ ನೇ ಪುಟದ | ಅಡಿಯಲ್ಲಿ ಓದಬೇಕು. |
| ,, | ೩ | ಐದು ... ... ... | ಎಯ್ದು |
| ೧೨ | ೧೦ | ವಿಹಾರಾಸಶಕ್ತಂ ... ... ... | ವಿಹಾರಾಸಕ್ತಂ |
| ,, | ,, | ಪಾದಾಜ್ಜ ... ... ... | ಪಾದಾಬ್ಜ |
| ೧೮ | ೨ | ಭವತ ... ... ... | ಭವತು |
| ೨೦ | ೧೨ | ವಹಸಿದರೇ ... ... ... | ವಹಿಸಿದರೇ |
| ೨೧ | ೨೨ | ತಿರುತ್ತ ... ... ... | ತಿರುಗುತ್ತ |
| ೨೨ | ೮ | ತಿಳಯುವುದು ... ... ... | ತಿಳಿಯುವುದು |
| ೨೪ | ೮ | ಕಥಮಿಹವ ... ... ... | ಕಥಮಿವ |
| ,, | ೨೧ | ಹೇಪ ರಮಶಿವ ... ... ... | ಹೇ ಪರಮಶಿವ |
| ೨೭ | ೮ | ಸಾಷಾತ್ಕರಿಸಿ ... ... ... | ಸಾಕ್ಷಾತ್ಕರಿಸಿ |
| ,, | ೧೪ | ಅಘ್ರಾಯ ... ... ... | ಆಘ್ರಾಯ |
| ,, | ೨೨ | ಶೀತಾಂಶಾ ... ... ... | ಶೀತಾಂಶೌ |
| ೩೩ | ೪ | ತನ್ನೀಲ ... ... ... | ತೇನೀಲ |
| ೩೪ | ೨೦ | ಭೃಶ್ಯದೇವ ... ... ... | ಭೃಶ್ಯದ್ದೇವ |
| ೩೭ | ೧೪ | ವಿಹರಸಿ ... ... ... | ವಿಹರತಿ |
| ೩೮ | ೧೩ | ಬುದಿಮಂತ ... ... ... | ಬುದ್ಧಿವಂತ |
| ೪೦ | ೭ | ಚರಿತಸ್ಪಾಪಂ ... ... ... | ಚರಿತಃಪಾಪಂ |
| ೬೧ | ೨೦ | ಇಚ್ಛತಿ ... ... ... | ಸಮಿಚ್ಛತಿ |

| ಪುಟ | ಪಙ್ಕ್ತಿ | ಅಶುದ್ಧ | | | | ಶುದ್ಧ |
|---|---|---|---|---|---|---|
| ೬೭ | ೩ | ಪರ್ಯಟಪಂ | ... | ... | ... | ಪರ್ಯಟನಂ |
| ,, | ೧೨ | ಮುಚ್ಚೇಷ್ಟಿತಂ | ... | ... | ... | ಮಚ್ಚೇಷ್ಟಿತಂ |
| ೭೦ | ೧ | ಸ್ಫೂಟ | ... | ... | ... | ಸ್ಫುಟ |
| ,, | ೭೯ | | ... | ... | ... | ೭೬ |
| ,, | ೧೩ | ೭೯ | ... | ... | ... | ೭೫ |
| ,, | ೧೮ | ಆದ್ಯಾ | ... | ... | ... | ಆದ್ಯಾ |
| ೮೮ | ೨೧ | ಮುಕ್ತಿ | ... | ... | ... | ಮುಕ್ತೇ |
| ೮೯ | ೬ | ಮುಕ್ತಿಃ | ... | ... | ... | ಮುಕ್ತೇಃ |

ಶ್ರೀಮಚ್ಛಂಕರ ಸದ್ಗುರುಭ್ಯೋನಮಃ.



ಪ್ರತಿಪದ ಟೀಕಾಸಹಿತವಾದ,

# ಶಿವಾನಂದಲಹರೀ.



**ಕಲಾಭ್ಯಾಂ ಚೂಡಾಲಂಕೃತ ಶಶಿಕಲಾಭ್ಯಾಂ ನಿಜತಪಃ-**
**ಫಲಾಭ್ಯಾಂ ಭಕ್ತೇಷು ಪ್ರಕಟಿತ ಫಲಾಭ್ಯಾಂ ಭವತು ಮೇ||**
**ಶಿವಾಭ್ಯಾಮಸ್ತೋಕ ತ್ರಿಭುವನ ಶಿವಾಭ್ಯಾಂ ಹೃದಿಪುನ-**
**ರ್ಭವಾಭ್ಯಾಮಾನಂದಸ್ಫುರದನುಭವಾಭ್ಯಾಂನತಿರಿಯಂ||೧||**

ಅವತಾರಿಕೆ—ಶ್ರೀಮಚ್ಛಂಕರಭಗವತ್ಪಾದಾಚಾರ್ಯರು ತಾವು ಮಾಡಲುದ್ಯಮಿಸಿದ ಈ ಗ್ರಂಥವು ನಿರ್ವಿಘ್ನಪರಿಸಮಾಪ್ತಿಯನ್ನೈದುವುದಕ್ಕಾಗಿ ಈ ಶ್ಲೋಕದಿಂ ಇಷ್ಟದೇವತಾ ನಮಸ್ಕಾರಾತ್ಮಕ ಮಂಗಳವನ್ನಾಚರಿಸುತ್ತಾರೆ; ಎಂದರೇ ತಾಯಿತಂದೆಗಳಾಗಿ ಸರ್ವ ಜಗತ್ಪಾಲಕರಾದ ಪಾರ್ವತೀ ಪರಮೇಶ್ವರರನ್ನು ವಂದಿಸಿದರೆಂದು ಭಾವವು.

ಟೀ || ಕಲಾಭ್ಯಾಂ-ಸಕಲ ವಿದ್ಯಾಸ್ವರೂಪಗಳಾದ, ಚೂಡಾಲಂಕೃತ ಶಶಿಕಲಾಭ್ಯಾಂ, ಚೂಡಾ-ಶಿಖೆಯಿಂದ, ಅಲಂಕೃತ-ಅಲಂಕರಿಸಲ್ಪಟ್ಟ, ಶಶಿ-ಚಂದ್ರನ, ಕಲಾಭ್ಯಾಂ - ಕಳೆಗಳುಳ್ಳ, ನಿಜತಪಃ-ಫಲಾಭ್ಯಾಂ, ನಿಜ-ಸ್ವಕೀಯಗಳಾದ, ತಪಃ-ತಪಸ್ಸುಗಳ, ಫಲಾಭ್ಯಾಂ-ಫಲಭೂತಗಳಾದಂಥಾ, ಭಕ್ತೇಷು-ತಮ್ಮ ಭಕ್ತರಲ್ಲಿ, ಪ್ರಕಟಿತಫಲಾ

ಭ್ಯಾಂ, ಪ್ರಕಟಿತ - ಪ್ರಕಟಪಡಿಸಲ್ಪಟ್ಟ, ಫಲಾಭ್ಯಾಂ-ಧರ್ಮಗಳುಳ್ಳ, ಅಸ್ತೋಕತ್ರಿಭುವನಶಿವಾಭ್ಯಾಂ, ಅಸ್ತೋಕ--ಅತಿಶಯವಾದ, ತ್ರಿಭುವನ-ಮೂರುಲೋಕಗಳಿಗೂ, ಶಿವಾಭ್ಯಾಂ--ಮಂಗಳಕರವಾದಂಥಾ, ಹೃದಿ-ಮನದೊಳು, ಪುನರ್ಭವಾಭ್ಯಾಂ-ಧ್ಯಾನಮಾಡುವದರ ದೆಸೆಯಿಂದಹುಟ್ಟುತಿರುವಂಥಾ, (ಎಂದರೆ ಧ್ಯಾನ ಮಾಡುವಾಗಲೆಲ್ಲ ಹುಟ್ಟುತಿರುವಂಥಾವರೆಂದು ತಾತ್ಪರ್ಯವು) ಇಂಥಾ ಆನಂದಸ್ಫುರದನುಭವಾಭ್ಯಾಂ, ಆನಂದ-ಆನಂದದಿಂ, ಸ್ಫುರತ್-ಪ್ರಕಾಶಿಸುತ್ತಿರುವ, ಅನುಭವಾಭ್ಯಾಂ-ಸ್ವರೂಪಜ್ಞಾನವುಳ್ಳ, ಶಿವಾಭ್ಯಾಂ-ಪಾರ್ವತೀಪರಮೇಶ್ವರರಿಗೋಸ್ಕರ, ಇಯಂ-ಈ, ಮೆ-ನನ್ನ ಸಂಬಂಧವಾದ, ನತಿಃ-ನಮಸ್ಕಾರವು, ಭವತು-ಆಗಲಿ.

**ಗಳಂತೀ ಶಂಭೋ ! ತ್ವಚ್ಚರಿತ ಸರಿತಃ ಕಿಲ್ಬಿಷರಜೋ-**
**ದಳಂತೀಧೀ ಕುಲ್ಯಾಸರಣಿಷುಪತಂತೀವಿಜಯತಾಮ್ ||**
**ದಿಶಂತೀ ಸಂಸಾರ ಭ್ರಮಣ ಪರಿತಾಪೋಪ ಶಮನಂ,**
**ವಸಂತೀ ಮಚ್ಚೇತೋ ಹ್ರದಭುವಿ ಶಿವಾನಂದಲಹರೀ ||೨||**

ಅವತಾರಿಕೆ—ಈ ಮೇರೆ ಮಂಗಳವನ್ನಾಚರಿಸಿ ತಮ್ಮ ಮನದೋಳ್ ಶಿವಾನಂದಸ್ಥೈರ್ಯವಂ ಪ್ರಾರ್ಥಿಸುತ್ತಾರೆಂತನೆ.

ಟೀ || ಹೇಶಂಭೋ!-ಎಲೈ ಸುಖಕಾರಣನೇ, ತ್ವಚ್ಚರಿತಸರಿತಃ, ತ್ವತ್-ನಿನ್ನ, ಚರಿತ-ಚರಿತ್ರವೆಂಬ, ಸರಿತಃ-ಪ್ರವಾಹದದೆಸೆಯಿಂದ, ಗಳಂತೀ-ಜಾರುತ್ತಿರುವ, ಕಿಲ್ಬಿಷರಜೋದಳಂತೀ - ಕಿಲ್ಬಿಷ-ಪಾಪಗಳೆಂಬ, ರಜಃ—ಧೂಳಿಯನ್ನು ದಳಂತೀ ಭೇದಿಸುತ್ತಿರುವ, ಧೀಕುಲ್ಯಾಸರಣಿಷು, ಧೀ-ಬುದ್ಧಿಗಳೆಂಬ, ಕುಲ್ಯಾ-ಅಲ್ಪಗಳಾದ **ಕಾ**ಲುವೆಗಳ, ಸರಣಿಷು-ಮಾರ್ಗಗಳಲ್ಲಿ, ಪತಂತೀ-ಬೀಳುತ್ತಿರುವ, ಸಂಸಾರಭ್ರಮಣಪರಿತಾಪೋಪಶಮನಂ, ಸಂಸಾರ-ಜನನಮರಣರೂಪ ಸಂಸಾರದಲ್ಲಿ,

ಭ್ರಮಣ ತಿರುಗೋಣದರಿಂದುಂಟಾದ, ಪರಿತಾಪ-ದುಃಖದ, ಉಪಶಮನಂ-ಶಾಂತಿಯನ್ನು, ದಿಶಂತೀ-ಕೊಡುತ್ತಿರುವ, ಮಚ್ಚೇತೋಹ್ರದ ಭುವಿ, ಮತ್-ನನ್ನ, ಚೇತಃ-ಮನಸ್ಸೆಂಬ, ಹ್ರದ-ಮಡುವಿನ, ಭುವಿ-ಭೂಮಿಯಲ್ಲಿ, ವಸಂತೀ-ಇರುತ್ತಿರುವ ಶಿವಾನಂದಲಹರೀ, ಶಿವ-ಶಿವನ ಧ್ಯಾನದಿಂದ ಉಂಟಾದ. ಆನಂದಲಹರೀ-ಅವಿಚ್ಛಿನ್ನ ಪ್ರವಾಹರೂಪವಾದ ಆನಂದವು, ವಿಜಯತಾಂ-ಇತರ ಪ್ರಾಕೃತಾನಂದ ಪ್ರವಾಹಗಳಿಗಿಂತ ಅಧಿಕೋತ್ಕೃಷ್ಟವಾಗಲಿ.

**ತ್ರಯೀವೇದ್ಯಂ ಹೃದ್ಯಂ ತ್ರಿಪುರಹರಮಾದ್ಯಂತ್ರಿನಯನಂ |**
**ಜಟಾಭಾರೋದಾರಂ ಚಲದುರಗಹಾರಂ ಮೃಗಧರಮ್,**
**ಮಹಾದೇವಂ ದೇವಂ ಮಯಿಸದಯಭಾವಂ ಪಶುಪತಿಂ |**
**ಚಿದಾಲಂಬಂ ಸಾಂಬಂ ಶಿವಮತಿವಿಡಂಬಂ ಹೃದಿಭಜೆ ||೩||**

ಅವತಾರಿಕೆ----ಇಲ್ಲಿ ಪ್ರಸ್ತುತವಾದ ಶಿವಾಭೇದ ಭಾವನಾರೂಪವಾದ ಆನಂದಕ್ಕೆ ಮೂಲಭೂತವಾದ ಮೂರ್ತಿಯನ್ನು ಈ ಶ್ಲೋಕದಿಂ ವರ್ಣಿಸುತ್ತಾರೆ.

ಟೀ|| ಅಹಂ-ನಾನು (ಎಂಬುದಾಗಿ ಅಧ್ಯಾಹಾರವು,) ತ್ರಯೀವೇದ್ಯಂ, ತ್ರಯೀ--ಮೂರು ವೇದಗಳಿಂದಲೂ, ವೇದ್ಯಂ--ತಿಳಿಯಲ್ಪಡತಕ್ಕವನಾಗಿಯೂ, ಹೃದ್ಯಂ-ಮನೋರಮಣೀಯನಾಗಿಯೂ, ತ್ರಿಪುರಹರಂ-ರಾಕ್ಷಸವಾಸಸ್ಥಾನಗಳಾಗಿ ಆಕಾಶಚರಗಳಾದ ಮೂರು ಪಟ್ಟಣಗಳನ್ನು ದಹಿಸಿದವನಾಗಿಯೂ, ಅಥವಾ ಸ್ಥೂಲಾದಿ ಶರೀರತ್ರಯವನ್ನು ಹರಿಸಿದವನಾಗಿಯೂ, . ಆದ್ಯಂ-ಜಗತ್ಸೃಷ್ಟಿಗಿಂತಲೂ ಮುಂದಿರುವವನಾಗಿಯೂ, ತ್ರಿನಯನಂ-ಮೂರು ಕಣ್ಣುಗಳನ್ನುಳ್ಳವನಾಗಿಯೂ, ಜಟಾಭಾರೋದಾರಂ-ಜಡೆಗಳ ಭಾರದಿಂಗಂಭೀರನಾಗಿಯೂ, ಚಲದುರಗಹಾರಂ-ಚಲಿಸುತ್ತಿರುವಂಥಾ ಯೆದೆಯಿಂದ ನಡೆಯುವವು-

ಗಳನ್ನೇ (ಎಂದರೆ ಸರ್ಪಗಳನ್ನೇ) ಹಾರವಾಗಿ ಧರಿಸಿರುವವನಾಗಿಯೂ (ಸರ್ಪಭೂಷಣನೆಂದುಭಾವವು), ಮೃಗಧರಂ-ಹುಲ್ಲೆಯನ್ನು ಧರಿಸಿರುವವನಾಗಿಯೂ, ಅಥವಾ ಚಿತ್ತು ಅಚಿತ್ತುಗಳಿಂದ ಕೂಡಿದವನಾಗಿಯೂ, ಮಹಾದೇವಂ-ಅಪರಿಚ್ಛಿನ್ನವಾದ ಸ್ವಪ್ರಕಾಶಾನಂದಮಯನಾಗಿಯೂ, ದೇವಂ-ಅಪ್ರಾಕೃತಾನಂದರೂಪನಾಗಿಯೂ, ಮಯಿ-ನನ್ನ ವಿಷಯದಲ್ಲಿ, ಸದಯಭಾವಂ-ದಯೆಯಿಂದೊಡಗೂಡಿದ ಭಾವನೆಯುಳ್ಳವನಾಗಿಯೂ, ಪಶುಪತಿಂ, ಪಶು-ಬ್ರಹ್ಮಾದಿ ಸೂಕ್ಷ್ಮಕೀಟಪರ್ಯಂತವಾಗಿ ದ್ವಿಪಾಚ್ಚತುಷ್ಪಾದ್ರೂಪಗಳಾದ ಪಶುಗಳಿಗೆ, ಪತಿಂ-ಸ್ವಾಮಿಯಾಗಿಯೂ, ಚಿದಾಲಂಬಂ-ಚಿತ್ತೆಂಬಸ್ವಾತ್ಮನಿಗೆ ಗೋಚರನಾಗಿಯೂ, ಸಾಂಬಂ-ಉಮಾಸಹಿತನಾಗಿಯೂ, ಅತಿವಿಡಂಬಂ-ಅತ್ಯಂತವಾಗಿ ಲೋಕಾನುಕರಣವಂ ಮಾಡುವನಾಗಿಯೂ ಇರುವ, ಶಿವಂ-ಮಂಗಳ ಮೂರ್ತಿಯಾದಈಶ್ವರನನ್ನು, ಹೃದಿ-ಮನಸ್ಸಿನಲ್ಲಿ, ಭಜೆ-ಭಾವಿಸುತ್ತೇನೆ.

ಇದರಿಂದ ಉಕ್ತವಾದ ಶಿವಾನಂದಲಹರಿಗೆ ಕಾರಣವಾದ ಈಶ್ವರ ಭಾವನೆಯಲ್ಲಿ ತದ್ದಿವ್ಯ ಗುಣಜ್ಞಾನವು ಬೇಕಾದುದರಿಂದ ಅವುಗಳನ್ನು ಮುಂದು ಪೇಳಿದರೆಂದು ಭಾವವು.

**ಸಹಸ್ರಂ ವರ್ತಂತೆ ಜಗತಿ ವಿಬುಧಾಃ ಕ್ಷುದ್ರಫಲದಾಃ ।**
**ನಮನ್ಯೆ ಸ್ವಪ್ನೇವಾ ತದನುಸರಣಂ ತತ್ಕೃತಫಲಂ ॥**
**ಹರಿಬ್ರಹ್ಮಾದೀನಾಮಪಿ ನಿಕಟಭಾಜಾಮಸುಲಭಂ ।**
**ಚಿರಂಯಾಚೆ ಶಂಭೊ! ಶಿವತವ ಪದಾಂಭೋಜಭಜನಂ॥೪॥**

ಅವತಾರಿಕೆ—ಮೊದಲು ಶಿವಾನಂದಲಹರಿಯಂ ಪ್ರಶಂಸಿಸಿ ಅದಕ್ಕೆ ಮೂಲವಾದ ಶಿವಭಜನವನ್ನೂ, ಅದಕ್ಕೆ ಆಲಂಬಕಗಳಾಗಿರುವ ಗುಣಗಳನ್ನೂ ಸಹ ನುಡಿದು ಇತರ ದೇವತಾಭಜನದಲ್ಲಿ ಉಪೇಕ್ಷಾಪ್ರಕಾಶನ ಪೂರ್ವಕವಾಗಿ ಅಂಥಾ ಶಿವ ಭಜನದಲ್ಲಿ ತಾನು ಪಡೆದಿರುವ

ತೀವ್ರವಾದ ಅಪೇಕ್ಷೆಯನ್ನು ತಿಳಿಸುತ್ತಾರೆ.

ಟೀ || ಹೇ ಶಂಭೋ !-ಎಲೈ ಭಕ್ತರಿಗೆ ಮಂಗಳವನ್ನು ಭಾವಿಸುವನೇ! ಹೇಶಿವ !-ಎಲೈ ಸ್ವಯಂ ಮಂಗಳ ಮೂರ್ತಿಯಾದ ದೇವರೇ ! ಜಗತಿ-ಲೋಕದೊಳು, ಕ್ಷುದ್ರಫಲದಾಃ-ಅಲ್ಪಫಲಗಳನ್ನೀಯುವಂಥಾ, ವಿಬುಧಾಃ-ದೇವರುಗಳು, ಸಹಸ್ರಂ-ಬಹುಜನರು, ವರ್ತಂತೆ-ಇದಾರೆ. ಅಹಂ-ನಾನು, ಸ್ವಪ್ನೇವಾ-ಕನಸಿನಲ್ಲಾದರೂ, ತದನುಸರಣಂ-ಅವರುಗಳನ್ನನುಸರಿಸುವಿಕೆಯನ್ನೂ, ತತ್ಕೃತಫಲಂ-ಅವರಿಂದುಂಟಾಗುವ ಪ್ರಯೋಜನವನ್ನೂ ಸಮಸ್ಯೇ-ಅಪೇಕ್ಷಿಸುವುದಿಲ್ಲ; ಮತ್ತು ಯಾವದನ್ನೆಂದರೆ, ನಿಕಟಭಾಜಾಂ-ಸನ್ನಿಧಿಯನ್ನು ಹೊಂದಿ ಇರುವ, ಹರಿಬ್ರಹ್ಮಾದೀನಾಮಪಿ- ವಿಷ್ಣುಬ್ರಹ್ಮಾದಿಗಳಿಗೂ, ಅಸುಲಭಂ-ದುರ್ಲಭವಾದಂಥಾ, ತವ-ನಿನ್ನ, ಪದಾಂಭೋಜಭಜನಂ-ಪಾದಪದ್ಮಗಳ ಧ್ಯಾನವನ್ನು ಚಿರಂ-ಯಾವಾಗಲೂ, ಯಾಚೆ-ಪ್ರಾರ್ಥಿಸುತ್ತಲಿದೇನೆ; ಎಂದರೆ ಸರ್ವದೇವತೋತ್ಕೃಷ್ಟನಾದ ಪರಮೇಶ್ವರನ ಪಾದಾಂಬುಜಧ್ಯಾನವು ದುರ್ಲಭವಾದುದರಿಂದ ಅದೇ ತನಗೆ ಅವಶ್ಯಬೇಕಾದುದೆಂದು ಭಾವವು.

**ಸ್ಮೃತೌ ಶಾಸ್ತ್ರೆವೈದ್ಯೆ ಶಕುನ ಕವಿತಾ ಗಾನಫಣಿತೌ ।**
**ಪುರಾಣೆ ಮಂತ್ರೇ ವಾ ಸ್ತುತಿ ನಟನ ಹಾಸ್ಯೇ ಷ್ವಚತುರಃ॥**
**ಕಥಂ ರಾಜ್ಞಾಂ ಪ್ರೀತಿರ್ಭವತಿ ಮಯಿಕೋಽಹಂ ಪಶುಪತೇ ।**
**ಪಶುಂಮಾಂ*ಸರ್ವಜ್ಞಪ್ರಥಿತಕೃಪಯಾಪಾಲಯವಿಭೊ॥೫॥**

ಅವತಾರಿಕೆ—ಅಲ್ಪಾಸ್ಥಿರ ಹೇಯ ಫಲಪ್ರದರಾದ ರಾಜಾದಿ ಮನುಷ್ಯರ ಪ್ರೀತಿಯನ್ನೇ ಸಂಪಾದಿಸುವುದಕ್ಕೆ ಯೋಗ್ಯತೆಯಿಲ್ಲದ ನನಿಗೆ ಸರ್ವೋತ್ತಮವಾದ ಆಮುಷ್ಮಿಕ ಫಲವಂ ಪಡೆಯುವ ಯೋ

* ಸರ್ವತ್ರ ಸ್ಫುರಿತ.

ಗ್ಯತೆಯೆಲ್ಲಿಯದು, ಅದು ಇಲ್ಲದ ಇಂಥಾ ವ್ಯರ್ಥಜನ್ಮಿಯಾದ ನನ್ನನ್ನು ನೀನುಪೇಕ್ಷಿಸಕೂಡದು, ಏತಕ್ಕೆಂದರೆ ನಿನಗೂ ನನಗೂ ಇರುವ ಸಂಬಂಧವಿಂಥಾದ್ದೆಂದು ಹೇಳುತ್ತಾರೆ.

ಟೀ|| ಸ್ಮೃತೌ-ಮನ್ವಾದಿ ಸ್ಮೃತಿಗಳಲ್ಲಿಯೂ, ಶಾಸ್ತ್ರೇ-ತರ್ಕ ವ್ಯಾಕರಣಮೀಮಾಂಸಾದಿ ಶಾಸ್ತ್ರಗಳಲ್ಲಿಯೂ, ವೈದ್ಯೇ-ವೈದ್ಯಶಾಸ್ತ್ರದಲ್ಲಿಯೂ, ಶಕುನ ಕವಿತಾ ಗಾನಫಣಿತೌ, ಶಕುನ-ಜ್ಯೋತಿಶ್ಶಾಸ್ತ್ರದಲ್ಲಿಯೂ,ಕವಿತಾ-ಕವಿತ್ವದಲ್ಲಿಯೂ, ಗಾನಫಣಿತೌ-ಸಂಗೀತದ ವಾಕ್ಪ್ರಕಾಶನದಲ್ಲಿಯೂ, ಪುರಾಣೇ-ಪೂರ್ವಚರಿತ್ರದಲ್ಲೂ, ಮಂತ್ರೇವಾ_ಮಂತ್ರಶಾಸ್ತ್ರದಲ್ಲಾದರೂ, ಸ್ತುತಿನಟನಹಾಸ್ಯೇಷು, ಸ್ತುತಿ-ಸ್ತೋತ್ರದಲ್ಲೂ, ನಟನ-ನಾಟ್ಯದಲ್ಲೂ, ಹಾಸ್ಯೇಷು-ಹಾಸ್ಯಮಾಡುವುದರಲ್ಲಿಯೂ, ಅಚತುರಃ-ಅಸಮರ್ಥನು, ಅಸ್ಮಿ-ಆಗಿದೇನೆ; ಮಯಿ-ಇಂಥಾ ನನ್ನಲ್ಲಿ,ರಾಜ್ಞಾಂ ಪ್ರಭುಗಳ, ಪ್ರೀತಿಃ-ಪ್ರೇಮವು ಕಥಂ-ಯಾವ ಕಾರಣದಿಂದ, ಭವತಿ-ಉಂಟಾಗುತ್ತಿದೆ?. ಹೇಪಶುಪತೇ! ಎಲೈಪಶುಪತಿಯೇ! ಅಹಂ-ಇಂಥಾ ನಾನು, ಕಃ-ಇಲ್ಲಿ ಹೇಳಲ್ಪಟ್ಟ ಶಾಸ್ತ್ರಪಂಡಿತರಲ್ಲಿ ಯಾವನು. (ಕೇವಲ ಅಜ್ಞಾನಿಯಾದ ತನ್ನ ಸ್ವರೂಪವನ್ನು ತಿಳಿಯದ ಪಶುವೆಂದು ಭಾವವು.) ಪಶುಂ-ಪಶುಪ್ರಾಯನಾದ, ಮಾಂ-ನನ್ನನ್ನು, ಹೇ ಸರ್ವಜ್ಞ! -ಸಕಲ ಹೃದಯ ಸಾಕ್ಷಿಯಾದವನೇ! ಹೇಪ್ರಥಿತ!-ಎಲೈ ಸಕಲನಿಗಮಾಗಮ ಪ್ರಖ್ಯಾತನೇ ! ಹೇವಿಭೋ! -ಎಲೈ ಸರ್ವವ್ಯಾಪಕನೇ ! (ಪಾಠಾಂತರ, ಸರ್ವತ್ರ-ಸಕಲಪ್ರಾಣಿ ಸಾಧಾರಣವಾಗಿ, ಸ್ಫುರಿತಕೃಪಯಾ,ಸ್ಫುರಿತ-ಪ್ರಕಾಶಿಸಲ್ಪಟ್ಟ) ಕೃಪಯಾ_ದಯೆಯಿಂದ, ಪಾಲಯ-ರಕ್ಷಿಸು.

ಎಂದರೆ ಇಲ್ಲಿ ಹೇಳಲ್ಪಟ್ಟ ಶಾಸ್ತ್ರಾದಿ ಚಾತುರ್ಯದಿಂದ ಅರಸರ ಪ್ರೇಮಕ್ಕೆ ಪಾತ್ರನಾಗಿ ಈ ಲೋಕದ ಸುಖವಂ ಪಡೆಯುವುದಕ್ಕೆ

ಯೋಗ್ಯತೆ ಇಲ್ಲದೇ ಇರೂ, ತನ್ನ ಸ್ವರೂಪವನ್ನು ತಾನಾಗಿ ತಿಳಿಯದೇ, ಕೇವಲ ಪಶುಪ್ರಾಯನಾದ ನನಗೆ ಪಶುಪತಿಯಾದನೀನೇ ಪಾಲಕನಾದು ದರಿಂದ ನ್ನತ್ತನ್ನು ರಕ್ಷಿಸಿ ಭದ್ರವಾಗಿ ಕಾಪಾಡಿಕೊಳ್ಳುವುದು ಸ್ವಾಮಿಗೆ ಅವಶ್ಯಕವೆಂಬುದನ್ನು ಸರ್ವಜ್ಞನಾದನೀನೇ ಬಲ್ಲೆ ಎಂದು ಭಾವವು.

**ಘಟೋವಾ ಮೃತ್ಪಿಂಡೋಽಪ್ಯಣುರಪಿಚ ಧೂಮೋಗ್ನಿರಚಲಃ।**
**ಪಟೋವಾ ತಂತುರ್ವಾ ಪರಿಹರತಿ ಕಿಂ ಘೋರಶಮನಂ॥**
**ವೃಥಾ ಕಂಠಕ್ಷೋಭಂ ವಹಸಿ ತರಸಾ ತರ್ಕವಚಸಾ ।**
**ಪದಾಂಭೋಜಂ ಶಂಭೋರ್ಭಜ ಪರಮಸೌಖ್ಯಂ ವ್ರಜಸುಧೀಃ॥೬॥**

ಅವತಾರಿಕೆ—ಹೀಗೆ ತನ್ನನ್ನು ರಕ್ಷಿಸುವುದಕ್ಕಾಗಿ ದೇವರಂ ಪ್ರಾರ್ಥಿಸಿ ಲೋಕದೊಳು ಹೇಯವಿಷಯಗಳಲ್ಲಿ ಮನವಂ ಪ್ರವೇಶ ಗೊಳಿಸಿ ತಮ್ಮ ಆಯುಷ್ಕಾಲವಂ ಕಳೆಯುವವರನ್ನು ಕಂಡು ಮನ ನೊಂದು ಅವರೆಲ್ಲರನ್ನೂ ಸರ್ವೋತ್ತಮವಾದ ಶಿವಭಜನದಲ್ಲಿ ಪ್ರವೃತ್ತಿ ಗೊಳಿಸುವುದಕ್ಕಾಗಿ ಮೊದಲು ಯಾವಾಗ್ಗೂ ತರ್ಕಶಾಸ್ತ್ರಾಭ್ಯಾಸ ವನ್ನೇ ಮಾಡುತಲಿರುವವನಂ ಕುರಿತು ಸ್ನೇಹಪೂರ್ವಕವಾಗಿ ದುರ್ವಿಷ ಯಗಳಂ ತ್ಯಜಿಸಿ ಶಿವಭಜನವಂ ಮಾಡೆಂದು ಬೇಡಿಕೊಳ್ಳುತ್ತಾರೆ.

ಟೀ || ಹೇಸುಧೀಃ! -ಎಲೆ ತರ್ಕಪಂಡಿತನೇ, ಘಟೋವಾ-ಮಡಿ ಕೆಯಾದರೂ, ಮೃತ್ಪಿಂಡಃ-ಮಣ್ಣಿನ ಮುದ್ದೆಯಾದರೂ, ಅಣುಃ-ಪರ ಮಾಣುವಾದರೂ, ಅಪಿಚ-ಮತ್ತು, ಧೂಮಃ-ಹೊಗೆಯಾದರೂ, ಅಗ್ನಿಃ-ಬೆಂಕಿಯಾದರೂ, ಅಚಲಃ-ಬೆಟ್ಟವಾದರೂ, ಪಟೋವಾ-ಬಟ್ಟೆಯಾದರೂ, ತಂತುರ್ವಾ-ನೂಲಾದರೂ, ಘೋರಶಮನಂ-ಕ್ರೂರನಾದ ಯಮನನ್ನು ಪರಿಹರತಿಕಿಂ-ಪರಿಹರಿಸುತ್ತಿದೆಯೇನು? ತರ್ಕವಚಸಾ-ತರ್ಕಶಾಸ್ತ್ರದವಾಕ್ಯ ಗಳಿಂದ, ಕಂಠಕ್ಷೋಭಂ-ಕಂಠದಶ್ರಮವನ್ನು, ವಹಸಿ-ಅನುಭವಿಸುತಲಿ

ದ್ಧೀಯೆ; ವೃಥಾ-ನಿಷ್ಪ್ರಯೋಜನವಾಗಿ ಶಂಭೋಃ-ಶುಭವನ್ನೀಯುವವನ ಪದಾಂಭೋಜಂ-ಚರಣಕಮಲವನ್ನು, ಭಜ-ಹೊಂದು. ಅದರಿಂದ, ತರಸಾ-ಶೀಘ್ರದಿಂಪರಮಸೌಖ್ಯಂ-ಮೋಕ್ಷಸುಖವನ್ನು, ವ್ರಜ-ಐದು.

ಇದರಿಂದ ತರ್ಕಶಾಸ್ತ್ರಪ್ರತಿಪಾದ್ಯಗಳಾದ, ಕಾರ್ಯ, ಉಪಾದಾನಕಾರಣ, ಹೇತು, ಸಾಧ್ಯಪಕ್ಷಗಳನ್ನು ಆಯಾ ಶಬ್ದಗಳಿಂದ ಯಾವಾಗೂ ನುಡಿಯುವುದರಿಂದ ಪಾಪ ಪರಿಹಾರವೂ, ಅದರಿಂದ ಪರಮೇಶ್ವರನ ಪ್ರಸಾದವೂ, ಅದರಿಂದ ಮೋಕ್ಷಾನಂದವೂ ಉಂಟಾಗಲರಿಯದು. ದೇಹಶ್ರಮ ಒಂದೇಯಾದ್ದರಿಂದ ಪರಮಶಿವನನ್ನು ಭಜಿಸಬೇಕೆಂದು ಭಾವವು.

**ಮನಸ್ತೇ ಪಾದಾಬ್ಜೇನಿವಸತು ವಚಸ್ತೋತ್ರಫಣಿತೌ ।**
**ಕರೌ ಚಾಭ್ಯರ್ಚಾಯಾಂ ಶ್ರುತಿರಪಿಕಥಾಕರ್ಣನವಿಧೌ ॥**
**ತವ ಧ್ಯಾನೇ ಬುದ್ಧಿರ್ನಯನಯುಗಳಂ ಮೂರ್ತಿವಿಭವೇ ।**
**ಪರಗ್ರಂಥಾನ್ಕೈರ್ವಾ ಪರಮಶಿವ ಜಾನೇ ಪರಮತಃ ॥೭॥**

ಅವತಾರಿಕೆ—ಹೀಗೆ ಭಗವದ್ಗುಣ ವರ್ಣನ ಪರಗಳಲ್ಲದ ಸಾಮಾನ್ಯ ಶಾಸ್ತ್ರ ವ್ಯಾಸಂಗದಿಂದಲೇ ತಮ್ಮ ಆಯುಷ್ಕಾಲವಂ ಕಳೆಯುವ ವಿದ್ವಾಂಸರೊಳು ತಾರ್ಕಿಕರನ್ನು ಕುರಿತ ಬುದ್ಧಿವಾದದಿಂ ಉಪಲಕ್ಷಣವಾಗಿ ಎಲ್ಲರನ್ನು ಬೇಡಿ, ತರುವಾಯ ತಮ್ಮ ಅಂತಃಕರಣವು ಕೇವಲ ಶಿವಾಯತ್ತವಾಗುವುದಕ್ಕೆ ಅದರ ಸಂಬಂಧದಿಂದ ಬಾಹ್ಯಕರಣಗಳೆಲ್ಲವೂ ಪರಮಶಿವ ವಿಷಯ ಪರಗಳಾಗುವುದೇ ಮುಖ್ಯ ಪ್ರಯೋಜನವಾಗಿ ಶಿವಭಜನ ಮುಖ್ಯಾಂಗಗಳಾಗುವುದರಿಂದ ತನ್ನ ಅಂತಃಕರಣ ಬಾಹ್ಯಕರಣಗಳೆಲ್ಲವೂ ನಿನ್ನ ಕೈಂಕರ್ಯ ಪರಗಳಾಗುವಾಗ ಇತರ ವಿಷಯ ಸಂಪರ್ಕ ಶೂನ್ಯನಾಗುತ್ತೇನೆಂದು ಹೇಳುತ್ತಾರೆ.

ಟೀ|| ಹೇ ಪರಮಶಿವ! - ಎಲೈ ಸರ್ವೋತ್ಕೃಷ್ಟನಾದ ಶಿವನೆ,! ಮನಃ- (ನನ್ನ) ಹೃದಯವು, ತೇ-ನಿನ್ನ, ಪಾದಾಬ್ಜೇ - ಚರಣಾರವಿಂದದಲ್ಲಿ ನಿವಸತು-ಸೇರಿಇರಲಿ. ವಚಃ - ವಾಗಿಂದ್ರಿಯವು, ಸ್ತೋತ್ರಫಣಿತೌ- ಸ್ತೋತ್ರಗಳನ್ನು ನುಡಿಯುವಿಕೆಯಲ್ಲಿ (ಸೇರಿ ಇರಲೆಂದು ಶೇಷವು), ಕರೌ-ಕೈಗಳು, ಅಭ್ಯರ್ಚಾಯಾಂಚ-ನಿನ್ನ ಅರ್ಚನೆಯಲ್ಲಿಯೂ, ನಿವಸತು-ಇರಲಿ, ಇಲ್ಲಿ ಚಕಾರವು ಕೈಗಳಿಂದ ಮಾಡಲ್ಪಡುವ ಎಲ್ಲಾ ಸೇವೆಗಳನ್ನೂ ಹೇಳುತ್ತದೆ. ಶ್ರುತಿರಪಿ-ಶ್ರೋತ್ರೇಂದ್ರಿಯವೂ, ಕಥಾಕರ್ಣನ ವಿಧೌ, ಕಥಾ-ನಿನ್ನ ಕಥೆಗಳನ್ನು, ಆಕರ್ಣನ-ಕೇಳ್ವಿಕೆಯ, ವಿಧೌ-ಕಾರ್ಯದಲ್ಲಿ, ನಿವಸತು-ಇರಲಿ. ಬುದ್ಧಿಃ-ಬುದ್ಧಿರೂಪವಾದ ಅಂತಃಕರಣವೃತ್ತಿಯು, ತವ-ನಿನ್ನ, ಧ್ಯಾನೇ-ಧ್ಯಾನದಲ್ಲಿ, ನಿವಸತು-ಇರಲಿ. ನಯನಯುಗಳಂ, ನಯನ-ಕಣ್ಣುಗಳ, ಯುಗಳಂ-ದ್ವಂದ್ವವು, ಎಂದರೆ ನೇತ್ರೇಂದ್ರಿಯವು, ಮೂರ್ತಿವಿಭವೇ-ನಿನ್ನ ಮೂರ್ತಿಯ ಅತಿಶಯದಲ್ಲಿ, ನಿವಸತು-ಇರಲಿ. ಅತಃಪರಂ-ಹೀಗೆ ನನ್ನ ಸರ್ವೇಂದ್ರಿಯಗಳೂ ನಿನ್ನ ಕೈಂಕರ್ಯಪರಗಳಾದ ತರುವಾಯ, ಪರಗ್ರಂಥಾನ್-ಇತರ ಗ್ರಂಥಗಳನ್ನು, ಕೈಃ-ಯಾವ ಇಂದ್ರಿಯಗಳಿಂದ, ಜಾನೇ-ತಿಳಿಯುವೆನು? ನನ್ನ ಸರ್ವೇಂದ್ರಿಯಗಳೂ ಶಿವಾಯತ್ತಗಳಾದುದರಿಂದ ದೇವತಾಂತರ ಮಹಿಮ ಪ್ರತಿಪಾದಕಗಳಾದ ಗ್ರಂಥಗಳನ್ನು ನೋಡುವುದಕ್ಕೆ ಅವಕಾಶವೇ ಇಲ್ಲವೆಂದು ಭಾವವು.

**ಯಥಾ ಬುದ್ಧಿ ಶ್ಶುಕ್ತೌ ರಜತಮಿತಿ ಕಾಚಾಶ್ಮನಿಮಣಿ-**
**ರ್ಜಲೆ ಪೈಷ್ಟೇ ಕ್ಷೀರಂ ಭವತಿ ಮೃಗತೃಷ್ಣಾಸುಸಲಿಲಂ ||**
**ತಥಾ ದೇವ ಭ್ರಾಂತ್ಯಾ ಭಜತಿ ಭವದನ್ಯಂ ಜಡಜನೋ।**
**ಮಹಾದೇವೇಶತ್ವಾಂ ಮನಸಿ ಚ ನಮತ್ವಾ ಪಶುಪತೇ! ||೮||**

ಅವತಾರಿಕೆ—ಇಂಥ ವೃತ್ತಿಯು ಸರ್ವಜನೋಚಿತವಾಗಿ ಇರು

ವಾಗ ಕೆಲವರು ದೇವತಾಂತರವಂ ಭಜಿಸಲೇತಕೆಂದರೆ ಅದರ ನಿಮಿತ್ತವಂ ಪೇಳುತ್ತಾರೆ.

ಟೀ|| ಹೇ ಮಹಾದೇವ !-ಎಲೈ ಅತಿಶಯವುಳ್ಳ ದೇವನೇ !, ಹೇ ಈಶ !-ಎಲೈ ಸರ್ವೇಶ್ವರನೇ!, ಹೇಪಶುಪತೆ!-ಎಲೈ ಸರ್ವಲೋಕಾಧಿಪತಿಯೇ,! ಶುಕ್ತೌ-ಮುತ್ತಿನ ಚಿಪ್ಪಿನಲ್ಲಿ, ರಜತಂ-ಬೆಳ್ಳಿಯು, ಇತಿ-ಎಂಬದಾಗಿ ಬುದ್ಧಿಃ-ಜ್ಞಾನವು, ಯಥಾ-ಹೇಗೆ, ಭವತಿ-ಹುಟ್ಟುತ್ತದೋ ಕಾಚಾಶ್ಮನಿ-ಗಾಜಿನಲ್ಲೂ ಕಲ್ಲಿನಲ್ಲೂ ಮಣಿಃ-ರತ್ನವು, ಇತಿ-ಎಂಬದಾಗಿ ಹೇಗೆಯೊ, ಪೈಷ್ಟೆ-ಹಿಟ್ಟುಕಲೆಸಿದ, ಜಲೆ-ನೀರಿನಲ್ಲಿ, ಕ್ಷೀರಂ-ಹಾಲು ಎಂಬದಾಗಿ ಹೇಗೆಯೋ, ಮೃಗತೃಷ್ಣಾಸು-ಬಿಸಿಲು ಕುದುರೆಗಳಲ್ಲಿ, ಸಲಿಲಂ-ನೀರು ಎಂಬದಾಗಿ ಹೇಗೆಯೋ, ತಥಾ-ಹಾಗೆ, ಜಡಜನಃ-ಮೂಢಜನವು, ತ್ವಾಂ-ನಿನ್ನನು, ಮನಸಿಜ-ಮನದೊಳು ಸಹ, ನಮತ್ವಾ-ಎಣಿಸದೆ, ಭವದನ್ಯಂ-ನಿನಗಿಂತ ಬೇರೊಂದು ವಸ್ತುವನ್ನು ಅಥವಾ ಬೇರೊಂದು ದೇವರನ್ನು. ದೇವಭ್ರಾಂತ್ಯಾ-ದೇವರೆಂಬ ಭ್ರಾಂತಿಯಿಂದ, ಭಜತಿ-ಭಜಿಸುತಲಿದೆ. ಎಂದರೇ ನಿನಗಿಂತ ಬೇರೊಂದು ವಿಷಯವನ್ನಾದರೂ ಬೇರೊಂದು ದೇವರನ್ನಾದರೂ ಭಜಿಸುವದು ಭ್ರಾಂತಿ ಕಾರ್ಯವಾದುದರಿಂದ ಲೋಕದೊಳೆಲ್ಲರೂ ನಿನ್ನನ್ನೇ ಭಜಿಸಬೇಕೆಂದು ಭಾವವು.

**ಗಭೀರೆ ಕಾಸಾರೆ ವಿಶತಿ ವಿಜನೇ ಘೋರವಿಪಿನೆ |**
**ವಿಶಾಲೆ ಶೈಲೆ ಚ ಭ್ರಮತಿ ಕುಸುಮಾರ್ಥಂ ಜಡಮತಿಃ ||**
**ಸಮರ್ಪ್ಯೈಕಂ ಚೇತಸ್ಸರಸಿಜ ಮುಮಾನಾಥ! ಭವತೇ**
**ಸುಖೇನ್ನೈವ ಸ್ಥಾತುಂ ಜನ ಇಹ ನಜಾನಾತಿ ಕಿಮಹೊ! ||೯||**

ಅವತಾರಿಕೆ—ಮೊದಲು ಶಿವಭಜನವು ಅವಶ್ಯ ಮಾಡತಕ್ಕದ್ದೆಂದು ಹೇಳಿ ತರುವಾಯ ಅದಕ್ಕಂಗಗಳಾದ ಸಲಕರಣ ವ್ಯಾಪಾರಗಳನ್ನು ತತ್ಪರಗಳನ್ನಾಗಿ ಮಾಡುವಿಕೆಯಂ ತಿಳಿಸಿ ಇದಂ ತಪ್ಪಿನಡೆಯುವುದು

ಭ್ರಾಂತಿ ಕಾರ್ಯವೆಂದು ತಿಳಿಸಿದಾಗ್ಯೂ ಅದು ಕಷ್ಟಸಾಧ್ಯವಾಗಿ ತೋ ಚಿದ್ದರಿಂದ ಎಲ್ಲಕ್ಕಿಂತಲೂ ಸುಲಭವಾದ ಒಂದುಪಾಯವಂ ತಿಳಿಸು ತ್ತಾರೆ.

ಟೀ|| ಹೇಉಮಾನಾಥ!-ಎಲೈ ಪಾರ್ವತೀಪತಿಯೇ !, ಜನಃ-ಜನವು, ಜಡಮತಿಸ್ಸನ್ - ಬುದ್ಧಿಹೀನವಾಗಿ, ಗಭೀರೆ - ಅಗಾಧವಾದ ಕಾಸಾರೆ-ಕೊಳದಲ್ಲಿ, ವಿಶತಿ-ಪ್ರವೇಶಿಸುತ್ತದೆ. ವಿಜನೆ - ನಿರ್ಜನವಾದ, ಘೋರವಿಪಿನೆ-ಭಯಂಕರವಾದ ಅಡವಿಯಲ್ಲಿಯೂ, ವಿಶಾಲೆ-ವಿಸ್ತಾರವುಳ್ಳ, ಶೈಲೇಚ - ಪರ್ವತದಲ್ಲಿಯೂ, ಕುಸುಮಾರ್ಥಂ - ಹುವ್ವುಗಳಿಗೋಸ್ಕರ, ಭ್ರಮತಿ-ತಿರುಗುತ್ತಲೂಯಿದೆ, ಎಂದರೆ, ಏಕಂ-ಈಡಿಲ್ಲದೆ ಒಂದೇಯಾಗಿ ರುವ, ಚೇತಸ್ಸರಸಿಜಂ-ಹೃದಯವೆಂಬ ಕಮಲವನ್ನು, ಭವತೇ-ನಿನಗೊ ಸ್ಕರ, ಸಮರ್ಪ್ಯ-ಸಮರ್ಪಿಸಿ, ಸುಖೇನೈವ-ಸುಖದಿಂದಲೇನೆ, ಇಹ-ಈ ಲೋಕದಲ್ಲಿ, ಸ್ಥಾತುಂ-ಇರುವುದಕ್ಕೆ, ನಜಾನಾತಿ-ತಿಳಿಯಲಿಲ್ಲ, ಅಹೋ-ಆಶ್ಚರ್ಯವು. ಕಿಂ-ಸುಳುವಾದ ಉಪಾಯವನ್ನು ಯಾತಕ್ಕೆ ತಿಳಿಯಲಿಲ್ಲವೋ, ಕಿಂ-ಅದರ ಜನ್ಮವು ಹೇಯವು. ಎಂದರೆ ಶಿವನನ್ನು ಬಿಟ್ಟು ಇತರ ದೇವತೆ ಗಳನ್ನು ಭಜಿಸುವಿಕೆಯು ಅಜ್ಞಾನ ಕಾರ್ಯವಾದುದರಿಂದ ಅದನ್ನು ನಿವೃತ್ತಿಗೊಳಿಸಿ ಮನಸ್ಸನ್ನು ಸದಾ ಶಿವಾರ್ಪಿತವಂ ಮಾಡುವುದೇ ಸ ರ್ವೋತ್ತಮವಾದ ಉಪಾಯವೆಂದು ಭಾವವು.

**ನರತ್ವಂ ದೇವತ್ವಂ ನಗವನ-ಮೃಗತ್ವಂ ಮಶಕತಾ |**
**ಪಶುತ್ವಂ ಕೀಟತ್ವಂ ಭವತು ವಿಹಗತ್ವಾದಿ ಜನನಂ ||**
**ಸದಾತ್ವತ್ಪಾದಾಬ್ಜಸ್ಮರಣ ಪರಮಾನಂದಲಹರೀ |**
**ವಿಹಾರಾಸಕ್ತಂಚೇದ್ಧೃದಯಮಿಹ ಕಿಂ ತೇನ ವಪುಷಾ?||೧೦||**

ಅವತಾರಿಕೆ—ಆತ್ಮನಿಗೆ ಶಿವ ಭಜನವವಶ್ಯವಾಗಿ ಕರ್ತವ್ಯವೆಂದು ಹೇಳಿ, ಆದಾಗ್ಯೂ ಪ್ರಾರಬ್ಧಕರ್ಮವಶದಿಂದ ಅವನಿಗೆ ತಿರ್ಯಗ್ಜನ್ಮವು

ಎಂದರೆ ಪಶುಪಕ್ಷ್ಯಾದಿಜನ್ಮವು ಪ್ರಾಪ್ತವಾದರೆ ಅಲ್ಲಿಯೂ ಮನಸ್ಸು ಶಿವಧ್ಯಾನಾನಂದವನ್ನೈದಿದರೆ ಆ ಶರೀರಗಳಿಂದ ಯೇನೂ ಹಾನಿಯಿಲ್ಲವೆಂದು ಹೇಳುತ್ತಾರೆ.

ಟೀ|| ನರತ್ವಂ-ಮನುಷ್ಯನಾಗುವಿಕೆ, ಎಂದರೆ ಮನುಷ್ಯಜನ್ಮವು ದೇವತ್ವಂ-ದೇವಜನ್ಮವು, ನಗ-ವನ-ಮೃಗತ್ವಂ, ನಗ-ಬೆಟ್ಟಗಳ ವನ-ಕಾಡುಗಳ ಮತ್ತು ಮೃಗತ್ವಂ-ಮೃಗಗಳ ಜನ್ಮವು, ಮಶಕತಾ-ಸೊಳ್ಳೆಯಜನ್ಮವು, ಪಶುತ್ವಂ-ಪಶುಜನ್ಮವು, ಕೀಟತ್ವಂ-ಹುಳುವಿನಜನ್ಮವು, ವಿಹಗತ್ವಾದಿ-ಪಕ್ಷಿಯ ಜನ್ಮಮೊದಲಾದ, ಜನನಂ-ಉತ್ಪತ್ತಿಯು, ಭವತು-ಉಂಟಾಗಲಿ, ಆದಾಗ್ಯೂ; ಹೃದಯಂ-ಮನಸ್ಸು, ಸದಾ-ಯಾವಾಗಲೂ ತ್ವತ್ಪಾದಾಬ್ಜಸ್ಮರಣ ಪರಮಾನಂದ ಲಹರೀ ವಿಹಾರಾಸಕ್ತಂ, ತ್ವತ್-ನಿನ್ನ ಪಾದಾಬ್ಜ-ಚರಣಾಂಬುಜದ, ಸ್ಮರಣ-ಧ್ಯಾನದಿಂದುಂಟಾದ ಪರಮಾನಂದ-ಉತ್ತಮಾನಂದದ, ಲಹರೀ-ಪ್ರವಾಹದೊಳು ವಿಹಾರ-ಈಜಾಡುವುದರಲ್ಲಿ, ಆಸಕ್ತಂ-ನಿರತವಾದದ್ದು, ಚೇತ್-ಆದರೆ, ತೇನ-ಅಂಥಾ, ವಪುಷಾ-ದೇಹದಿಂದ, ಕಿಂ-ಯೇನುಹಾನಿ;

ಎಂದರೆ ಆತ್ಮನಿಗೆ ಯಾವಜನ್ಮವುಂಟಾದರೂ ಮನಸ್ಸು ಯಾವಾಗ್ಯೂ ಶಿವಧ್ಯಾನ ಸುಖವಂ ಕೈಗೊಂಡಿದ್ದರೆ ಹೇಯಜನ್ಮವಂ ಪಡೆದರೂ ನಿನ್ನಭಜನಕ್ಕೆ ಚ್ಯುತಿಯಿಲ್ಲವಾಗಿ ಅದು ದುರ್ಲಭವಾಗಿದ್ದರೂ ನಿನ್ನ ಕೃಪೆಯಿಂದಲೇ ಸುಲಭವಾಗಬೇಕೆಂದು ಭಾವವು.

**ವಟುರ್ವಾ ಗೇಹೀ ವಾ ಯತಿರಪಿ ಜಟೀ ವಾ ತದಿತರೊ |**
**ನರೊ ವಾ ಯಃಕಶ್ಚಿದ್ಭವತು ಭವ ಕಿಂ ತೇನ ಭವತಿ ||**
**ಯದೀಯಂ ಹೃತ್ಪದ್ಮಂ ಯದಿಭವದಧೀನಂ ಪಶುಪತೇ! |**
**ತದೀಯ ಸ್ತ್ವಂ ಶಂಭೋಭವಸಿ ಭವಭಾರಂಚ ವಹಸಿ||೧೧||**

ಅವತಾರಿಕೆ —ಆತ್ಮನು ಪೂರ್ವಕರ್ಮಗಳಿಂದ ಹೇಯಜನ್ಮವಂ ಪಡೆದರೂ ಶಿವಧ್ಯಾನಾನಂದಭರಿತನಾದರೆ ಅವನಲ್ಲಿ ಶಿವನಕೃಪೆಯು ಅವಶ್ಯವುಂಟಾಗುತ್ತದೆಂದು ಹೇಳಿ ಅಷ್ಟುಮಾತ್ರವೇಯಲ್ಲದೆ ಉತ್ತಮ ಜನ್ಮವನ್ನೈದಿ ವಿಧ್ಯುಕ್ತಗಳಾದ ನಾಲ್ಕು ಆಶ್ರಮಗಳನ್ನು ವಹಿಸಿ ಆಯಾ ಆಶ್ರಮ ಧರ್ಮಗಳನ್ನು ಸರಿಯಾಗಿ ನಡೆಯಿಸಿದರೂ ತನ್ನ ಹೃದಯ ಕಮಲವನ್ನು ನಿನ್ನಲ್ಲಿ ಅರ್ಪಿಸದಿದ್ದರೆ ಏನೂ ಪ್ರಯೋಜನವಿಲ್ಲವು, ಅರ್ಪಿಸಿದವನಿಗೆ ಸರ್ವಸೌಭಾಗ್ಯವೂ ಉಂಟಾಗುತ್ತದೆಂದು ಹೇಳುತ್ತಾರೆ.

ಹೇ ಭವ!-ಎಲೈ ಶಂಭುವೇ!, ಹೇ ಪಶುಪತೇ!-ಎಲೈ ಜಗದೀಶನೇ!, ಯಃ ಕಶ್ಚಿತ್-ಯಾವನಾದರೂ ಒಬ್ಬ, ನರಃ-ಮನುಷ್ಯನು, ವಟುರ್ವಾ-ಬ್ರಹ್ಮಚಾರಿಯಾದರೂ, ಗೇಹೀ ವಾ-ಗೃಹಸ್ಥನಾದರೂ, ಯತಿರಪಿ-ಸನ್ಯಾಸಿಯಾದರೂ, ಜಟೀ ವಾ-ವಾನಪ್ರಸ್ಥನಾದರೂ, ತದಿತರೋ ವಾ-ಅವಧೂತನಾದರೂ, ಭವತು-ಆಗಲಿ; ತೇನ-ಅದರಿಂದ, ಕಿಂ ಭವತಿ-ಏನಾಗುತ್ತದೆ, ಯದೀಯಂ-ಯಾವನ ಸಂಬಂಧವಾದ, ಹೃತ್ಪದ್ಮಂ-ಹೃದಯಕಮಲವು ಭವದಧೀನಂ-ನಿನ್ನ ಅಧೀನವಾಗಿ ಯದಿ (ಭವತಿ)-ಆದರೆ, ತ್ವಂ-ನೀನು, ತದೀಯಃ-ಅವನ ಅಧೀನನಾಗಿ, ಭವಸಿ-ಆಗುತಲಿದ್ದೀಯೆ. ಮತ್ತು ಅವನ ಭವಭಾರಂ-ಆ ಜನ್ಮದ ಭಾರವನ್ನು, ವಹಸಿ-ವಹಿಸುತಲಿದ್ದೀಯೆ. ಎಂದರೆ ನೀನು ನಿನ್ನ ಭಕ್ತನಿಗೆ ಅಧೀನನಾಗಿ ಅವನನ್ನು ಕೃತಾರ್ಥನಂ ಮಾಡುತಲಿದ್ದೀಯೆಂದು ಭಾವವು.

**ಗುಹಾಯಾಂ ಗೇಹೇ ವಾ ಬಹಿರಪಿ ವನೇ ವಾಽದ್ರಿಶಿಖರೇ ।**
**ಜಲೇ ವಾ ವಹ್ನೌ ವಾ ವಸತು ವಸತೇಃ ಕಿಂ ವದ ಫಲಂ ॥**
**ಸದಾ ಯಸ್ಯೈವಾಂತಃಕರಣಮಪಿ ಶಂಭೋ! ತವ ಪದೇ ।**
**ಸ್ಥಿತಂ ಚೇದ್ಯೋಗೋಽಸೌ ಸಚ ಪರಮಯೋಗೀ ಸಚ ಸುಖೀ ॥**

ಅವತಾರಿಕೆ—ಆಶ್ರಮ ಧರ್ಮಗಳನ್ನು ಸರಿಯಾಗಿ ನಡೆಸುವವರಿಗೆ ಮಾತ್ರವಲ್ಲದೆ ಪರ್ವತ, ವನ, ಗುಹಾದಿ ಏಕಾಂತ ಪ್ರದೇಶಗಳಲ್ಲಿ ಯೋಗಾಭ್ಯಾಸವಂ ಮಾಡುವ ಯೋಗಿಗಳಿಗೂ ಸಹ ನಿನ್ನ ಪದಧ್ಯಾನವೇ ಪರಮ ಪ್ರಯೋಜಕವೆನ್ನುತ್ತಾರೆ.

ಟೀ||ಹೇ ಶಂಭೋ!-ಎಲೈ ಸುಖಕರನಾದ ಪರಮೇಶ್ವರನೇ ! ಗುಹಾಯಾಂ-ಗುಹೆಯಲ್ಲಾದರೂ, ಗೇಹೇವಾ-ಮನೆಯೊಳಗಾದರೂ, ಬಹಿಃ-ಹೊರಗೆಯಾದರೂ, ವನೇ ವಾ-ಅಡವಿಯಲ್ಲಾದರೂ, ಅದ್ರಿಶಿಖರೆ-ಬೆಟ್ಟದಕೊನೆಯಲ್ಲಾದರೂ, ಜಲೇವಾ-ನೀರಲ್ಲಾದರೂ, ವಹ್ನೌವಾ-ಅಗ್ನಿಯಲ್ಲಾದರೂ, ವಸತು-ವಾಸಮಾಡಲಿ; ವಸತೇಃ-ಅಂತಹ ವಾಸದಿಂದ ಕಿಂ-ಏನು, ಫಲಂ-ಫಲವು, ವದ-ಹೇಳು; ಯಸ್ಯ-ಯಾವ ಮನುಷ್ಯನ, ಅಂತಃಕರಣಂ-ಹೃದಯವು, ತವ-ನಿನ್ನ, ಪದೇ-ಚರಣದಲ್ಲೇ ಸದಾ-ಯಾವಾಗ್ಲೂ, ಸ್ಥಿತಂಚೇತ್-ಇದ್ದುದೇ ಆದರೆ, ಅಸೌ ಆ ಇರುವಿಕೆಯೇ ಯೋಗಃ-ಯೋಗವು, ಸಚ-ಅವನೇ, ಪರಮಯೋಗೀ-ದೊಡ್ಡನಿರ್ವಿಕಲ್ಪಸಮಾಧಿಯುಳ್ಳಯೋಗೀಶ್ವರನು, ಸಚ-ಅವನೇ ಸುಖಿ-ಬ್ರಹ್ಮಾನಂದವುಳ್ಳವನು.

ಎಂದರೆ ಗುಹೆ ಮುಂತಾದ ಏಕಾಂತಸ್ಥಲಗಳಲ್ಲಿ ಯೋಗಾಭ್ಯಾಸ ಮಾಡಿದರೂ ನಿನ್ನಪದಧ್ಯಾನ ಮಾಡದವನಿಗೆ ಯೋಗಸಿದ್ಧಿ ಇಲ್ಲವೆಂದು ಭಾವವು.

**ಅಸಾರೇ ಸಂಸಾರೇ ನಿಜಭಜನದೂರೇ ಜಡಧಿಯಾ ।**
**ಭ್ರಮಂತಂ ಮಾಮಂಧಂಪರಮಕೃಪಯಾ ಪಾತುಮುಚಿತಂ॥**
**ಮದನ್ಯಃ ಕೋ ದೀನಸ್ತವ ಕೃಪಣ ರಕ್ಷಾತಿನಿಪುಣಃ ।**
**ತ್ವದನ್ಯಃ ಕೋ ವಾ ಮೇ ತ್ರಿಜಗತಿ ಶರಣ್ಯಃ ಪಶುಪತೇ! ॥೧೩॥**

ಅವತಾರಿಕೆ—ಹೀಗೆ ವರ್ಣಾಶ್ರಮಧರ್ಮನಿಷ್ಠರು ಮುಂತಾದ ಉತ್ತಮಾಧಿಕಾರಿಗಳನ್ನು ಹೇಳಿ ಕೇವಲ ಅಧಮನಾದ ತನಗೆ ಪರಮೇ

ಶ್ವರನೇ ಅವಲಂಬವೆಂಬುದನ್ನು ಚಮತ್ಕಾರದಿಂದ ತಿಳಿಸುತ್ತಾರೆ.

ಟೀ|| ಹೇ ಪಶುಪತೇ!-ಎಲೈ ಜಗದೀಶನೇ, ಅಸಾರೇ-ಸಾರವಿಲ್ಲದ, ನಿಜಭಜನದೂರೇ-ನಿನ್ನ ಭಜನಕ್ಕೆ ದೂರವಾದ ಎಂದರೆ ನಿನ್ನ ಭಜನವೇ ಇಲ್ಲದ, ಸಂಸಾರೇ - ಜನ್ಮಪರಂಪರೆಯಲ್ಲಿ, ಜಡಧಿಯಾ - ಮಂದಬುದ್ಧಿಯಿಂದ, ಭ್ರಮಂತಂ-ತಿರುಗುತಲಿರುವ, ಅಂಧಂ - ಜ್ಞಾನಶೂನ್ಯನಾದ, ಮಾಂ-ನನ್ನನ್ನು, ಪಾತುಂ-ರಕ್ಷಿಸುವುದಕ್ಕೆ, ಉಚಿತಂ-ಯೋಗ್ಯವು ನಿನಗೆಂದು¦ಶೇಷವು. ಕೃಪಣರಕ್ಷಾತಿನಿಪುಣಃ-ದೀನರನ್ನು ರಕ್ಷಿಸುವವಿಷಯದಲ್ಲಿ ಅತಿಸಮರ್ಥನಾದವನೇ, ತವ-ನಿನಗೆ, ಮದನ್ಯಃ-ನನಗಿಂತ ಬೇರೊಬ್ಬ, ದೀನಃ-ದೀನನು, ಕಃ-ಯಾವನು ಇರುವನು; ಮೇ-ನನಗೆ, ತ್ವದನ್ಯಃ-ನಿನಗಿಂತ ಬೇರೊಬ್ಬ, ಶರಣ್ಯಃ-ರಕ್ಷಕನು, ತ್ರಿಜಗತಿ-ಮೂರು ಲೋಕದಲ್ಲೂ, ಕಃ-ಯಾವನು ದೊರಕುತ್ತಾನೆ, ಎಂದರೆ, ಯಾವನೂ ಇಲ್ಲ. ಎಂದರೆ ಲೋಕದೊಳು ನನಗಿಂತ ಬೇರೊಬ್ಬ ದೀನನಿಲ್ಲ, ನಿನಗಿಂತ ಬೇರೊಬ್ಬ ರಕ್ಷಕನಿಲ್ಲವಾಗಿ ನಮ್ಮ ಇಬ್ಬರಿಗೂ ಸಂಬಂಧವು ಉಚಿತವಾಗಿ ಇದೆ ಎಂದು ಭಾವವು.

**ಪ್ರಭುಸ್ತ್ವಂದೀನಾನಾಂ ಖಲು ಪರಮಬಂಧುಃ ಪಶುಪತೇ! ।**
**ಪ್ರಮುಖ್ಯೋಹಂತೇಷಾಮಪಿಕಿಮುತಬಂಧುತ್ವಮನಯೋಃ ||**
**ತ್ವಯೈವ ಕ್ಷಂತವ್ಯಾಶ್ಶಿವ! ಮದಪರಾಧಾಶ್ಚ ಸಕಲಾಃ ।**
**ಪ್ರಯತ್ನಾತ್ಕರ್ತವ್ಯಂ ಮದವನಮಿಯಂ ಬಂಧುಸರಣಿಃ|| ೧೪**

ಅವತಾರಿಕೆ—ಪೂರ್ವಶ್ಲೋಕದಿಂದ ಪರಮೇಶ್ವರನಿಗೂ ತನಗೂ ಇರುವ ಮುಖ್ಯಸಂಬಂಧವನ್ನು ಹೇಳಿ ಈ ಶ್ಲೋಕದಿಂದ ಅಂತಹ ಸಂಬಂಧಕ್ಕೆ ಉಚಿತವಾದ ಕಾರ್ಯವನ್ನು ಹೇಳುತ್ತಾರೆ.

ಟೀ|| ಹೇ ಪಶುಪತೇ!-ಎಲೈ ಜಗದೀಶನೇ! ತ್ವಂ-ನೀನು, ದೀನಾನಾಂ-ಬಡವರಿಗೆ, ಪ್ರಭುಃ-ನಾಥನು, ದೀನಭಾವವನ್ನು ಹೋಗಲಾ

ಡಿಸಲು ಸಮರ್ಥನು. ಆದುದರಿಂದಲೇ ಅವರಿಗೆ, ಪರಮಬಂಧುಃ-ಮುಖ್ಯಬಂಧುವು, ಖಲು-ಆಗುತಲಿದ್ದೀಯಲ್ಲವೆ? ಅಹಮಪಿ-ನಾನೂ. ತೇಷಾಂ-ಆ ದೀನರಿಗೆಲ್ಲಾ, ಪ್ರಮುಖ್ಯಃ-ಶ್ರೇಷ್ಠನಾಗಿ ಇದೇನೆ; ಅನಯೋಃ-ಇಂತಹ ನಮ್ಮ ಇಬ್ಬರಿಗೂ, ಬಂಧುತ್ವಂ-ಬಾಂಧವ್ಯವು, ಕಿಮುತ-ವಿಚಾರಿಸತಕ್ಕದೇನಿದೆ; ಆದುದರಿಂದ, ಮದಪರಾಧಾಃ-ನಿನ್ನ ಆಜ್ಞೆಯನ್ನುಲ್ಲಂಘಿಸಿದಂತಹ ನನ್ನ ಅಪರಾಧಗಳು, ಸಕಲಾಃ-ಎಲ್ಲವೂ, ತ್ವಯ್ಯೈವ-ನಿನ್ನಿಂದಲೇ. ಕ್ಷಂತವ್ಯಾಃ-ಕ್ಷಮಿಸಲ್ಪಡತಕ್ಕವು; ಮತ್ತು ಮದವನಂ-ನನ್ನ ರಕ್ಷಣವನ್ನು, ಪ್ರಯತ್ನಾತ್-ವಿಶೇಷಕೃಪೆಯ ದೆಸೆಯಿಂದ,ಕರ್ತವ್ಯಂ-ಮಾಡತಕ್ಕದು; ಇಯಂ-ಇಂತಹ ಕಾರ್ಯವೇ, ಬಂಧುಸರಣಿಃ-ಬಂಧುಗಳು ಮಾಡುವ ಕೆಲಸವಾಗಿರುತ್ತದೆ. ಎಂದರೆ ನಮ್ಮ ಈ ಸಂಬಂಧದಿಂದ ನಾನು ಮಾಡಿದ ಅಪರಾಧಗಳನ್ನೆಲ್ಲಾ ಮನ್ನಿಸಿ ನಿನ್ನ ಕೃಪೆಗೆ ನಾನು ಅಪಾತ್ರನಾಗಿದ್ದರೂ ಅಂತಹ ಸಂಬಂಧವನ್ನುಲಾಲಿಸಿ ನನ್ನನ್ನು ರಕ್ಷಿಸಲೇಬೇಕೆಂದು ಭಾವವು.

**ಉಪೇಕ್ಷಾ ನೋ ಚೇತ್ಕಿಂನಹರಸಿ ಭವಧ್ಯಾನವಿಮುಖಾಂ |**
**ದುರಾಶಾಭೂಯಿಷ್ಠಾಂವಿಧಿಲಿಪಿಮಶಕ್ತೋಯದಿಭವಾನ್ ||**
**ಶಿರಸ್ತದ್ವೈಧಾತ್ರಂ ನ ನ ಖಲು ಸುವೃತ್ತಂ ಪಶುಪತೇ! |**
**ಕಥಂ ವಾ ನಿರ್ಯತ್ನಂ ಕರನಖಮುಖೇನೈವ ಲುಲಿತಂ|| ೧೫**

ಅವತಾರಿಕೆ—ತನ್ನನು ರಕ್ಷಿಸುವುದು ದೇವರಿಗೆ ಅವಶ್ಯ ಕರ್ತವ್ಯವಾಗಿ ಇದ್ದರೂ, ಅದರಲ್ಲಿ ಅವನಿಗೆ ಅಪೇಕ್ಷೆ ಇದ್ದರೂ, ಅದು ಅಸಾಧ್ಯವಾದರೆ ಏನುಮಾಡಬೇಕೆಂದು ಶಂಕಿಸುವ ಪಕ್ಷದಲ್ಲಿ ಸರ್ವಶಕ್ತನಾದವನಿಗೆ ಜಗದೊಳಸಾಧ್ಯವಾದುದೊಂದೂ ಇಲ್ಲವೆಂದು ಹೇಳುತ್ತಾರೆ.

ಟೀ|| ಹೇ ಪಶುಪತೇ!-ಎಲೈ ಜಗದೀಶನೇ!, ನಿನಗೆ ಉಪೇಕ್ಷಾ-ಉಪೇಕ್ಷೆಯು. ನೋಚೇತ್-ಇಲ್ಲದಿದ್ದರೆ, ಭವಧ್ಯಾನ ವಿಮುಖಾಂ-ನಿನ್ನ ಧ್ಯಾನವನ್ನು ಅಗಲಿಸುವಂತಹ, ಮತ್ತು ದುರಾಶಾ ಭೂಯಿಷ್ಠಾಂ-ಕೆಟ್ಟ ವಿಷಯದ ಆಶೆಯನ್ನೇ ಹೆಚ್ಚುಮಾಡಿಸುವಂತಹ, ವಿಧಿಲಿಪಿಂ - ಬ್ರಹ್ಮನ ಬರಹವನ್ನು, ಕಿಂ-ಏತಕ್ಕೆ. ನ ಹರಸಿ-ಪರಿಹರಿಸುವುದಿಲ್ಲ, ಭವಾನ್-ನೀನು, ಅಶಕ್ತಃ-ಶಕ್ತಿಯಿಲ್ಲದವನಾಗಿ, ಯದಿ-ಆದರೆ, ನ ನಖಲು - ನಖಗಳಿಂದ ಛೇದಿಸುವುದಕ್ಕಶಕ್ಯವಾಗಿಯೂ, ಸುವೃತ್ತಂ-ದೃಢವಾದಸ್ಥಿತಿಯುಳ್ಳುದಾಗಿಯೂ, (ಇದ್ದ) ವೈಧಾತ್ರಂ-ಬ್ರಹ್ಮದೇವನ ಸಂಬಂಧವಾಗಿಯೂ, ತತ್-ಅಂತಃ ಪ್ರಸಿದ್ಧವಾದ, ಶಿರಃ-ತಲೆಯು, (ನಿನ್ನಿಂದ) ನಿರ್ಯತ್ನಂ-ಪ್ರಯತ್ನ ವಿಲ್ಲದೆಯೇ, ಕಥಂ-ಹೇಗೆ, ನಖಮುಖೇನೈವ-ಉಗುರುಗಳ ಕೊನೆಯಿಂದಲೇ ಲುಲಿತಂ-ಛೇದಿಸ್ಪಟ್ಟಿತ್ತು. ಇದರಿಂದ ಅವಶ್ಯವಾಗಿ ನನ್ನನ್ನು ರಕ್ಷಿಸಬೇಕೆಂದು ನಿನಗೆ ಅಪೇಕ್ಷೆಯಿದ್ದರೆ ರಕ್ಷಿಸದೆ ಇರಲಾರೆ ಮತ್ತು ಲೋಕದೊಳು ನಿನಗಸಾಧ್ಯವಾದುದು ಯಾವುದೂ ಇಲ್ಲವೆಂದು ಭಾವವು.

**ವಿರಿಂಚಿರ್ದೀರ್ಘಾಯುರ್ಭವತು ಭವತಾ ತತ್ಪರಶಿರ |**
**ಶ್ಚತುಷ್ಕಂ ಸಂರಕ್ಷ್ಯಂ ಸ ಖಲು ಭುವಿ ದೈನ್ಯಂ ಲಿಖಿತವಾನ್ ||**
**ವಿಚಾರಃ ಕೋವಾ ಮಾಂ ವಿಶದಕೃಪಯಾ ಪಾತಿ ಶಿವತೇ |**
**ಕಟಾಕ್ಷವ್ಯಾಪಾರಃ ಸ್ವಯಮಪಿ ಚ ದೀನಾವನಪರಃ ||೧೬||**

ಅವತಾರಿಕೆ—ತಾನು ಶಿವಭಜನಪರನಾಗುವುದಕ್ಕೆ ಪರಮೇಶ್ವರನ ಕೃಪೆಯೇ ಕಾರಣವಾದುದರಿಂದ ಅದುಂಟಾಗುವುದಕ್ಕೆ ದೀನತ್ವವೇ ಕಾರಣವಾಗಿ ಅಂತಹ ದೈನ್ಯವನ್ನೇ ತನ್ನ ಹಣೆಯಲ್ಲಿ ಬರೆದ ಬ್ರಹ್ಮನು ತನಗೆ ಪರಮೋಪಕಾರಿಯಾದುದರಿಂದ ಅಂತಹವನನ್ನು ದೀರ್ಘಾಯುಷ್ಮಂತನಂ ಮಾಡಬೇಕೆಂದು ದೇವರನ್ನು ಪ್ರಾರ್ಥಿಸುತ್ತಾರೆ.

ಟೀ|| ಹೇ ಶಿವ!-ಎಲೈ ಮಂಗಳಕರನಾದ ದೇವರೇ!, ವಿರಿಂಚಿಃ-ಬ್ರಹ್ಮನು, ದೀರ್ಘಾಯುಃ-ದೀರ್ಘಾಯುಷ್ಮಂತನಾಗಿ, ಭವತು-ಆಗಲಿ. ಭವತಾ-ನಿನ್ನಿಂದ, ತತ್ಪರಶಿರಶ್ಚತುಷ್ಕಂ-ಅವನ ಮಿಕ್ಕ ನಾಲ್ಕು ತಲೆಗಳು, ಸಂರಕ್ಷ್ಯಂ-ರಕ್ಷಿಸಲ್ಪಡತಕ್ಕುವು, ಸ ಖಲು-ಅವನೇಅಲ್ಲವೆ, ಭುವಿ-ಭೂಮಿಯಲ್ಲಿ, ದೈನ್ಯಂ-ದೀನಭಾವವನ್ನು, ಲಿಖಿತವಾನ್-ಬರೆದನು; ವಿಚಾರಃ-ಅಲೋಚನವು, ಕಃ-ಯಾವುದು, ಏತಕ್ಕೆಂದರ್ಥವು; ಸ್ವಯಮಪಿ-ತಾನೇ, ದೀನಾವನಪರಃ-ದೀನರಕ್ಷಣದಲ್ಲಿ ಆಸಕ್ತನಾದ, ತೇ-ನಿನ್ನ, ಕಟಾಕ್ಷವ್ಯಾಪಾರಃ-ಕಣ್ಣಿನೋಟವು. ಮಾಂ-ದೀನನಾದ ನನ್ನನ್ನು, ವಿಶದಕೃಪಯಾ-ಪ್ರಕಾಶವಾದ ದಯೆಯಿಂದ, ಪಾತಿ-ರಕ್ಷಿಸುತ್ತದೆ. ಎಂದರೆ ನಿನ್ನ ಪ್ರಸಾದಕ್ಕೆ ಕಾರಣವಾದ ದೀನತ್ವವು ನನಗೆ ಉಂಟಾಗಬೇಕೆಂದು ಭಾವವು.

**ಫಲಾದ್ವಾಪುಣ್ಯಾನಾಂ ಮಯಿ ಕರುಣಯಾ ವಾತ್ವಯಿ ವಿಭೋ।**
**ಪ್ರಸನ್ನೇಪಿ ಸ್ವಾಮಿನ್! ಭವದಮಲಪಾದಾಬ್ಜಯುಗಳಂ ||**
**ಕಥಂ ಪಶ್ಯೇಯಂ ಮಾಂ ಸ್ಥಗಯತಿ ನಮಸ್ಸಂಭ್ರಮಜುಷಾಂ।**
**ನಿಲಿಂಪಾನಾಂ ಶ್ರೇಣಿರ್ನಿಜಕನಕಮಾಣಿಕ್ಯಮಕುಟೈಃ ||೧೭||**

ಅವತಾರಿಕೆ__ನನ್ನ ಪೂರ್ವ ಸುಕೃತದಿಂದ ನಿನ್ನ ಕೃಪೆಯುಂಟಾದರೂ ನಿನ್ನ ಪಾದಾಬ್ಜದರ್ಶನವು ನನಗೆ ದುರ್ಲಭವಾಗಿ ಇದೆ ಎಂದು ಹೇಳುತ್ತಾರೆ.

ಟೀ|| ಹೇ ವಿಭೋ!-ಎಲೈ ಪ್ರಭುವೇ!, ಹೇ ಸ್ವಾಮಿನ್!-ಎಲೈ ಅಧಿಪತಿಯೇ!, ಪುಣ್ಯಾನಾಂ-ಪುಣ್ಯಗಳ, ಫಲಾದ್ವಾ-ಫಲದಿಂದಲಾಗಲೀ, ಮಯಿ-ನನ್ನಲ್ಲಿ, ಕರುಣಯಾವಾ-ಕೃಪೆಯಿಂದಲಾಗಲಿ, ತ್ವಯಿ-ನೀನು, ಪ್ರಸನ್ನೇಪಿ-ಅನುಗ್ರಹವುಳ್ಳವನಾಗಿ ಇದ್ದರೂ, ಭವದಮಲಪಾದಾಬ್ಜಯುಗಳಂ-ನಿನ್ನ ಪರಿಶುದ್ಧವಾದ ಪದಕಮಲಗಳ ಜತೆಯನ್ನು, ನಮಸ್ಸಂಭ್ರಮ

ಜುಷಾಂ-ನಮಸ್ಕಾರದಲ್ಲಿ ಕುತೂಹಲವಂ ಪಡೆದಿರುವ, ನಿಲಿಂಪಾನಾಂ-ದೇವತೆಗಳ, ಶ್ರೇಣಿಃ-ಸಮೂಹವು, ನಿಜಕನಕಮಾಣಿಕ್ಯಮಕುಟೈಃ-ತಮ್ಮ ಸ್ವರ್ಣರತ್ನಮಯಗಳಾದ ಕಿರೀಟಗಳಿಂದ, ಮಾಂ - ನನ್ನನು ಕುರಿತು, ಸ್ಥಗಯತಿ-ಮುಚ್ಚುತ್ತಲಿದೆ (ಮರೆಮಾಡುತಲಿದೆ); ಹೀಗಿರಲಾಗಿ, ಕಥಂ-ಹೇಗೆ, ಪಶ್ಯೇಯಂ-(ಅಂತಹ ಪಾದಾಬ್ಜವನ್ನು) ನೋಡೇನು, ಎಂದರೆ ಸಮಸ್ತ ದೇವತೆಗಳೂ ಯಾವಾಗ್ಲೂ ನಮಸ್ಕರಿಸುತ್ತಿರುವ ನಿನ್ನ ಪಾದ ದರ್ಶನವು ಪಾಮರಮನುಷ್ಯನಾದ ನನಗೆ ಹೇಗೆ ದೊರಕೀತೆಂದು ಭಾವವು.

**ತ್ವಮೇಕೋ ಲೋಕಾನಾಂ ಪರಮಫಲದೋ ದಿವ್ಯಪದವೀಂ ।**
**ವಹಂತಸ್ತ್ವನ್ಮೂಲಾಂ ಪುನರಪಿ ಭಜಂತೇ ಹರಿಮುಖಾಃ ॥**
**ಕಿಯದ್ವಾ ದಾಕ್ಷಿಣ್ಯಂ ತವ ಶಿವ ಮದಾಶಾ ಚ ಕಿಯತೀ ।**
**ಕದಾ ವಾ ಮದ್ರಕ್ಷಾಂ ವಹಸಿ ಕರುಣಾಪೂರಿತದೃಶಾ ॥೧೮॥**

ಅವತಾರಿಕೆ__ಬ್ರಹ್ಮಾದಿಗಳು ಬಹುಕಾಲ ನಿನ್ನಂ ಭಜಿಸಿ ಸರ್ವೋತ್ತಮಪದವಂ ಹೊಂದಿ ಇದ್ದರೂ ನಿನ್ನನ್ನೇ ಭಜಿಸುತಲಿದಾರೆ, ಹೀಗಿರುವಲ್ಲಿ ನನ್ನಲ್ಲಿ ನಿನಗೆ ಹೇಗೆ ಕೃಪೆಯಿದ್ದೀತು, ಯಾವಾಗ ನನ್ನನ್ನು ರಕ್ಷಿಸುತ್ತೀಯೋ ಎಂದು ಹೇಳುತ್ತಾರೆ.

ಟೀ॥ ಹೇ ದೇವ!-ಎಲೈ ದೇವರೇ!, ತ್ವಂ-ನೀನು, ಲೋಕಾನಾಂ-ಎಲ್ಲಲೋಕಗಳಿಗೂ ಪರಮಫಲದಃ-ಉತ್ಕೃಷ್ಟಫಲವಂ ಕೊಡುವನು, ಏಕ ಏವ-ಒಬ್ಬನೇ ಆಗಿದ್ದಿ; ಹರಿಮುಖಾಃ-ವಿಷ್ಣು ಮುಂತಾದ ದೇವತೆಗಳು, ತ್ವನ್ಮೂಲಾಂ-ನಿನ್ನಿಂದುಂಟಾಗಿರುವ, ದಿವ್ಯಪದವೀಂ-ದಿವ್ಯಸ್ಥಾನವನ್ನು, ವಹನ್ತಃ-ಅನುಭವಿಸುವಂತವರಾಗಿ, ಪುನರಪಿ-ಮತ್ತೂ, ಭಜನ್ತೇ-ಭಜಿಸುತ್ತಲಿದಾರೆ; ಹೇ ಶಿವ!-ಎಲೈ ಶಿವನೆ! ತವ-ನಿನ್ನ, ದಾಕ್ಷಿಣ್ಯಂ-ಪ್ರೇಮವು, (ಅಂತಹವರಲ್ಲಿ,) ಕಿಯದ್ವಾ-ಎಷ್ಟುತಾನೇ ಇದ್ದೀತು; ಮದಾಶಾ ಚ-ನನ್ನ

ಅಪೇಕ್ಷೆಯೂ, ಕಿಯತೀ-ಎಷ್ಟು ಅಧಿಕವಾಗಿದೆ. ಕರುಣಾಪೂರಿತದೃಶಾ-ಕೃಪಾಪೂರ್ಣದೃಷ್ಟಿಯಿಂದ, ಮದ್ರಕ್ಷಾಂ-ನನ್ನ ರಕ್ಷಣೆಯನ್ನು, ಕದಾ ವಾ-ಯಾವಾಗತಾನೆ, ವಹಸಿ-ಮಾಡುತ್ತಲಿದ್ದೀಯೆ; ಎಂದರೆ ದೊಡ್ಡ ದೇವತೆಗಳು ನಿನ್ನನು ಯಾವಾಗಲೂ ಭಜಿಸುತಲಿರುವಲ್ಲಿ ಅವರ ಮೇಲೆ ನಿನಗೆ ದಾಕ್ಷಿಣ್ಯವಿದ್ದೀತೇ ಹೊರತು ನನ್ನಲ್ಲಿ ಇರಲಾರದು, ಆದರೂ ನನ್ನ ಆಶೆಗೆ ಮಿತಿಯಿಲ್ಲ, ಕೇವಲ ಕೃಪೆಯಿಂದಲೇ ನೀನು ಯಾವಾಗ ರಕ್ಷಿಸುತ್ತೀಯೋ ತಿಳಿಯಲಿಲ್ಲವೆಂದು ಭಾವವು.

**ದುರಾಶಾಭೂಯಿಷ್ಠೇ ದುರಧಿಪ ಗೃಹದ್ವಾರಘಟಕೇ ।**
**ದುರಂತೇ ಸಂಸಾರೇ ದುರಿತನಿಲಯೇ ದುಃಖಜನಕೇ ॥**
**ಮದಾಯಾಸಂ ಕಿಂ ನ ವ್ಯಪನಯಸಿ ಕಸ್ಯೋಪಕೃತಯೇ ।**
**ವದೇಯಂ ಪ್ರೀತಿಶ್ಚೇತ್ತವಶಿವ ಕೃತಾರ್ಥಾಃ ಖಲು ವಯಂ॥೧೯**

ಅವತಾರಿಕೆ—ನೀನು ದೊಡ್ಡವರಲ್ಲೇ ಪಕ್ಷಪಾತವನ್ನು ವಹಿಸಿದರೆ ನನ್ನ ಶ್ರಮವಂ ತೀರಿಸುವವರಾರು? ಯಾರ ಉಪಕಾರಕ್ಕಾಗಿ ನನ್ನ ಆಯಾಸವಂ ತೀರಿಸಲಿಲ್ಲವೋ ತಿಳಿಯದು, ನಿನ್ನ ಕೃಪೆಯಿದ್ದರೆ ನಾವು ಕೃತಾರ್ಥರಾದೇವೇ ಹೊರತು ಇಲ್ಲದಿದ್ದರೆ ನಮಗೆ ಬೇರೆ ಅವಲಂಬವಿಲ್ಲವೆನ್ನುತ್ತಾರೆ.

ಟೀ॥ ಹೇ ಶಿವ!-ಎಲೈ ಮಂಗಳಕರನೇ, ದುರಾಶಾಭೂಯಿಷ್ಠೇ-ಕೆಟ್ಟಆಶೆಯಿಂದ ಅಧಿಕವಾಗಿ, ತುಂಬಿರುವ, ದುರಧಿಪ ಗೃಹದ್ವಾರಘಟಕೆ-ದುಷ್ಟರಾದ ಪ್ರಭುಗಳ ಮನೆಬಾಗಿಲುಗಳಲ್ಲಿ ಕಾಯಿಸುವಂತಾ, ದುರಂತೆ-ಕೆಟ್ಟ ಅಂತವುಳ್ಳ, ದುರಿತನಿಲಯೆ-ಪಾಪಗಳಿಗೆ ಸ್ಥಾನವಾದ, ದುಃಖಜನಕೆ-ದುಃಖಗಳನ್ನುಂಟುಮಾಡುವ, ಸಂಸಾರೆ-ಜನ್ಮದಲ್ಲಿ, ಮದಾಯಾಸಂ-ನನ್ನ ಶ್ರಮವನ್ನು, ಕಿಂ-ಏತಕೆ, ನವ್ಯಪನಯಸಿ-ಹೋಗಲಾಡಿಸುವುದಿಲ್ಲ? ಕಸ್ಯೋಪಕೃತಯೆ-ಯಾರಿಗೆ ಉಪಕಾರಕ್ಕೋಸ್ಕರ, ವದ-ಹೇಳು,

ಇಯಂ-ಇದು, ತವ-ನಿನ್ನ, ಪ್ರೀತಿಶ್ಚೇತ್-ಪ್ರೇಮಕ್ಕೆ ಗುರುತಾದರೆ, ವಯಂ-ನಾವುಗಳು, ಕೃತಾರ್ಥಾಃ ಖಲು-(ಸಂದೇಹವಿಲ್ಲದೇ) ಕೃತಕೃತ್ಯರೇಸರಿ. ಎಂದರೆ ಬ್ರಹ್ಮದೇವನು ಯಾವಾಗ್ಯೂ ಸಂಸಾರದಲ್ಲಿ ಕಷ್ಟಪಡುವಂತೆ ನನ್ನ ಹಣೆಯಲ್ಲಿ ಬರದನೆಂಬದಾಗಿ ಅವನ ಬರಹವನ್ನು ಸತ್ಯಮಾಡುವ ಉಪಕಾರಕ್ಕಾಗಿಯೋ ತಿಳಿಯದು, ನೀನೇ ಹೇಳು. ಹಾಗಾದರೆ ಅಂತ ನಿನ್ನ ಕೃಪೆಯಿಂದಲೇ ನಾವೂ ಕೃತಾರ್ಥರಾಗಬೇಕೇ ಹೊರತು ನಮಗೆ ಬೇರೆ ಗತಿಯಿಲ್ಲವೆಂದು ಭಾವವು.

**ಸದಾ ಮೋಹಾಟವ್ಯಾಂ ಚರತಿ ಯುವತೀನಾಂ ಕುಚಗಿರೌ।**
**ನಟತ್ಯಾಶಾ ಶಾಖಾ ಸ್ವಟತಿ ಝಟಿತಿ ಸ್ವೈರಮಭಿತಃ ॥**
**ಕಪಾಲಿಭಿಕ್ಷೋಮೇ ಹೃದಯಕಪಿಮತ್ಯಂತ ಚಪಲಂ।**
**ದೃಢಂಭಕ್ತ್ಯಾಬಧ್ವಾ ಶಿವಭವದಧೀನಂ ಕುರುವಿಭೋ॥೨೦॥**

ಅವತಾರಿಕೆ—ಅತಿ ಚಪಲವಾದ ನನ್ನ ಹೃದಯವೆಂಬ ಕಪಿಯನ್ನು ನಿನ್ನ ಭಕ್ತಿಯೆಂಬ ಪಾಶದಿಂದ ಕಟ್ಟಿ ನಿನ್ನ ಅಧೀನವನ್ನಾಗಿ ಇಟ್ಟುಕ್ಕೊಳ್ಳಬೇಕೆಂದು ಹೇಳುತ್ತಾರೆ.

**ಟೀ**॥ ಹೇ ಕಪಾಲಿನ್!-ಎಲೈ ಕಪಾಲವುಳ್ಳ, ಭಿಕ್ಷೋ-ಭಿಕ್ಷುಕನೆ! ಹೇ ಶಿವ!-ಮಂಗಳಕರನೇ! ಹೇ ವಿಭೊ!-ಎಲೈ ಪ್ರಭುವೆ!, (ನನ್ನ ಹೃದಯವೆಂಬ ಕಪಿಯು,) ಸದಾ-ಯಾವಾಗ್ಯೂ, ಮೋಹಾಟವ್ಯಾಂ-ಮೋಹ-ಅಜ್ಞಾನವೆಂಬ, ಅಟವ್ಯಾಂ-ಅರಣ್ಯದಲ್ಲಿ, ಚರತಿ - ಸಂಚರಿಸುತ್ತಲಿದೆ. ಯುವತೀನಾಂ-ಸ್ತ್ರೀಯರ, ಕುಚಗಿರೌ-ಸ್ಥನಗಳೆಂಬ ಪರ್ವತಗಳಲ್ಲಿ, ನಟತಿ-ಧುಮುಕಾಡುತಲಿದೆ, ಆಶಾಶಾಖಾಸು-ಆಶಾ-ಆಶೆಗಳೆಂಬುವ, ಶಾಖಾಸು-ರಂಬೆಗಳಲ್ಲಿ, ಝಟಿತಿ-ಶೀಘ್ರವಾಗಿ, ಸ್ವೈರಂ-ಮನಸ್ಸಿಗೆ ಬಂದಂತೆ ಅಭಿತಃ-ನಾಲ್ಕುಕಡೆಯಲ್ಲಿಯೂ, ಅಟತಿ-ತಿರುಗುತ್ತಲಿದೆ; (ಹೀಗೆ) ಅತ್ಯಂತ ಚಪಲಂ-ಅತಿ ಚಪಲವಾದ, ಮೇ - ನನ್ನ, ಹೃದಯಕಪಿಂ - ಮನಸ್ಸೆಂಬುವ

ಕೋತಿಯನ್ನು, ಭಕ್ತ್ಯಾ-ಭಕ್ತಿಯೆಂಬ (ಹಗ್ಗದಿಂದ), ದೃಢಂ-ಬಿಗಿಯಾಗಿ. ಬಧ್ವಾ-ಕಟ್ಟಿ, ಭವದಧೀನಂ-ನಿನ್ನ ವಶವನ್ನಾಗಿ, ಕುರು-ಮಾಡು; ಎಂದರೆ, ದುರ್ವಿಷಯದಲ್ಲಿ ಪ್ರವರ್ತಿಸುವ ನನ್ನ ಹೃದಯವು ನಿನ್ನ ಭಕ್ತಿಯಿಂದ ಯಾವಾಗ್ಯೂ ನಿನ್ನನು ಶರಣುಹೊಂದುವಂತೆ ನೀನೇ ಮಾಡಬೇಕೆಂದು ಭಾವವು. ಇಲ್ಲಿ ಕಪಾಲಭಿಕ್ಷುಕನಾದ ಜೋಗಿಯು ಕೋತಿಯನ್ನು ಆಡಿಸುತ್ತಾನಾಗಿ ಆಚಾರ್ಯರು ದೇವರನ್ನು ಹೇ ಕಪಾಲಿನ್! ಭಿಕ್ಷೋ! ಎಂದು ಕರೆದು ಮನಸ್ಸಿಗೆ ಕಪಿಸಾಮ್ಯವನ್ನು ಕೊಟ್ಟರೆಂದು ತಿಳಿಯುವುದು.

**ಧೃತಿಸ್ತಂಭಾಧಾರಾಂ ದೃಢಗುಣ ನಿಬದ್ಧಾಂಸಗಮನಾಂ |**
**ವಿಚಿತ್ರಾಂ ಪದ್ಮಾಢ್ಯಾಂ ಪ್ರತಿದಿವಸ ಸನ್ಮಾರ್ಗಘಟಿತಾಂ ||**
**ಸ್ಮರಾರೆ ಮಚ್ಚೇತಸ್ಫುಟ ಪಟಕುಟೀಂ ಪ್ರಾಪ್ಯವಿಶದಾಂ |**
**ಜಯಸ್ವಾಮಿನ್! ಶಕ್ತ್ಯಾ ಸಹಶಿವ ಗಣೈಸ್ಸೇವಿತವಿಭೋ |೨೧|**

ಅವತಾರಿಕೆ—ಪೂರ್ವಶ್ಲೋಕದಿಂದ ತನ್ನ ಹೃದಯವನ್ನು ದೇವರು ಸ್ವಾಧೀನ ಪಡಿಸಿಕೊಳ್ಳುವ ಬಗೆಯನ್ನು ಹೇಳಿ, ಈ ಶ್ಲೋಕದಲ್ಲಿ ಅದರ ವಿನಿಯೋಗವನ್ನು ಹೇಳುತ್ತಾರೆ.

ಟೀ|| ಹೇಸ್ಮರಾರೆ!-ಎಲೈ ಮನ್ಮಥನನ್ನು ಜಯಿಸಿದವನೇ!, ಹೇ ಸ್ವಾಮಿನ್!-ಎಲೈ ಸ್ವಾಮಿಯೇ!, ಹೇ ಶಿವ!-ಎಲೈ ಮಂಗಳಕರನೇ!, ಹೇ ಗಣೈಸ್ಸೇವಿತ-ಪ್ರಮಥಗಣಗಳಿಂದ ಸೇವಿಸಲ್ಪಟ್ಟ, ಹೇ ವಿಭೋ!-ಎಲೈ ಜಗತ್ಪತಿಯೆ!, ಧೃತಿಸ್ತಂಭಾಧಾರಾಂ—ಧೃತಿ-ಧೈರ್ಯವೆಂಬ, ಸ್ತಂಭಾ-ಸ್ತಂಭವನ್ನು, ಆಧಾರಾಂ-ಆಧಾರವಾಗಿ ಉಳ್ಳಂಥಾ, ದೃಢ-ದೃಢಗಳಾದ, ಗುಣ-ಗುಣಗಳಿಂದ, (ಹಗ್ಗಗಳಿಂದ,) ನಿಬದ್ಧಾಂ-ಕಟ್ಟಲ್ಪಟ್ಟಂಥಾ, ಸಗಮನಾಂ-ಚಲನವುಳ್ಳಂಥಾ, ವಿಚಿತ್ರಾಂ-ಕೆಟ್ಟಸಂಸ್ಕಾರಗಳನ್ನುಳ್ಳ (ನಾನಾ ವರ್ಣವುಳ್ಳಂಥಾ,) ಪದ್ಮಾಢ್ಯಾಂ-ಲಕ್ಷ್ಮೀವಿಲಾಸವುಳ್ಳ, ಕಮಲಚಿತ್ರ

ಗಳುಳ್ಳ, ಪ್ರತಿದಿವಸ ಸನ್ಮಾರ್ಗ ಘಟಿತಾಂ-ಪ್ರತಿದಿನವೂ ರಾಜಮಾರ್ಗದ ಹತ್ತಿರ ಸ್ಥಾಪಿಸಲ್ಪಟ್ಟಂಥಾ, (ತತ್ವವಿಚಾರದಲ್ಲಿ ನಿರತವಾದಂಥಾ.) ವಿಶದಾಂ-ನಿರ್ಮಲವಾದಂಥಾ, ಮಚ್ಚೇತಸ್ಸ್ಫುಟಪಟಕುಟೀಂ-ನನ್ನ ಮನಸ್ಸೆಂಬ ಪ್ರಕಾಶವಾದ ಗುಡಾರವನ್ನು, ಪ್ರಾಪ್ಯ-ಹೊಂದಿ, ಶಕ್ತ್ಯಾಸಹ-ದೇವಿಯೊಂದಿಗೆ, ಜಯ ಸರ್ವೋತ್ಕರ್ಷದಿಂದ ವರ್ತಿಸು. ಎಂದರೆ ನಿನ್ನ ಅಧೀನವಾದ ನನ್ನ ಹೃದಯದಲ್ಲಿ ಸದಾ ನೀನು ವಾಸಮಾಡಬೇಕೆಂದು ಭಾವವು.

**ಪ್ರಲೋಭಾದ್ಯೈರರ್ಥಾಹರಣ ಪರತಂತ್ರೋಧನಿಗೃಹೆ।**
**ಪ್ರವೇಶೋದ್ಯುಕ್ತಸ್ಸಭ್ರಮತಿಬಹುಧಾ ತಸ್ಕರಪತೆ! ॥**
**ಇಮಂ ಚೇತಶ್ಚೋರಂ ಕಥಮಿಹ ಸಹೇ ಶಂಕರವಿಭೋ!।**
**ತವಾಧೀನಂ ಕೃತ್ವಾ ಮಯಿನಿರಪರಾಧೆ ಕುರುಕೃಪಾಂ ॥೨೨।**

ಅವತಾರಿಕೆ—ತನ್ನ ಹೃದಯವು ಕಳ್ಳತನದಿಂದ ದುರ್ವಿಷಯದಲ್ಲಿ ಪ್ರವರ್ತಿಸುವುದರಿಂದ ಅದನ್ನು ನೀನೇ ನಿಗ್ರಹಿಸಬೇಕೆಂದು ಪ್ರಾರ್ಥಿಸುತ್ತಾರೆ.

ಟೀ॥ ತಸ್ಕರಪತೇ!-ಕಳ್ಳರಿಗೆ ಪತಿಯಾದವನೆ!, ಹೇ ಶಂಕರ-ಎಲೈ ಸುಖಕರನೇ!, ಹೇ ವಿಭೋ!-ಎಲೈ ವ್ಯಾಪಕನೆ!, ನನ್ನ ಮನಸ್ಸೆಂಬ ಕಳ್ಳನು, ಪ್ರಲೋಭಾದ್ಯೈಃ-ಆಶೆ ಹುಟ್ಟಿಸುವುದು ಮೊದಲಾದವುಗಳಿಂದ, ಅರ್ಥಾಹರಣ ಪರತಂತ್ರಃ-ಧನವನ್ನು ಸಂಪಾದಿಸುವುದರಲ್ಲಿ ಆಸಕ್ತವಾಗಿ, ಧನಿಗೃಹೇ-ಧನವಂತರ ಮನೆಯಲ್ಲಿ, ಪ್ರವೇಶೋದ್ಯುಕ್ತಸ್ಸನ್-ಪ್ರವೇಶದಲ್ಲಿ ಉದ್ಯುಕ್ತನಾಗಿ, ಬಹುಧಾ - ಬಹುಪ್ರಕಾರವಾಗಿ, ಭ್ರಮತಿ - ತಿರುಗುತಲಿಧೆ; ಇಮಂ-ಇಂಥಾ, ಚೇತಶ್ಚೋರಂ-ಮನಸ್ಸೆಂಬಕಳ್ಳನನ್ನು, ಕಥಮಿಹಸಹೆ-ಈ ಲೋಕದಲ್ಲಿ ಹ್ಯಾಗೆತಾನೆ ಸಹಿಸುವೆನು, ಇಮಂ ಇಂತಾದ್ದರನ್ನು, ತೇ-ನಿನಗೆ, ಅಧೀನಂ-ವಶವಾದುದನ್ನಾಗಿ, ಕೃತ್ವಾ-ಮಾಡಿ, ನಿರಪರಾಧೆ-

ಅಪರಾಧವಿಲ್ಲದ, ಮಯಿ-ನನ್ನಲ್ಲಿ, ಕೃಪಾಂ-ಕೃಪೆಯನ್ನು, ಕುರು-ಮಾಡು. ಎಂದರೆ ನನ್ನ ಮನಸ್ಸು ಸರ್ವದೋಷಗಳಿಗೂ ಸ್ಥಾನವಾಗಿ ಇರುವುದರಿಂದ ಅದನ್ನು ಸ್ವಾಧೀನಪಡಿಸಿಕೊಳ್ಳುವುದು ನಿನ್ನ ಕೆಲಸವಾಗಿದೆ ಎಂದು ಭಾವವು.

**ಕರೋಮಿ ತ್ವತ್ಪೂಜಾಂ ಸಪದಿ ಸುಖದೋ ಮೇ ಭವ ವಿಭೋ! ।**
**ವಿಧಿತ್ವಂ ವಿಷ್ಣುತ್ವಂ ದಿಶಸಿ ಖಲು ತಸ್ಯಾಃ ಫಲಮಿತಿ ॥**
**ಪುನಶ್ಚ ತ್ವಾಂ ದ್ರಷ್ಟುಂ ದಿವಿ ಭುವಿ ವಹನ್ ಪಕ್ಷಿಮೃಗತಾ ।**
**ಮದೃಷ್ಟ್ವಾ ತತ್ಖೇದಂ ಕಥಮಿಹ ಸಹೇ ಶಂಕರ ವಿಭೋ ॥೨೩**

ಅವತಾರಿಕೆ—ಬ್ರಹ್ಮತ್ವವು ವಿಷ್ಣುತ್ವವು ಈ ಎರಡು ನಿನ್ನ ಪೂಜೆಗೆ ಫಲವಾಗಿದ್ದರೂ ಅವುಗಳನ್ನು ತಾನು ಪ್ರಾರ್ಥಿಸುವದಿಲ್ಲ; ಎಂದರೆ ನಿರ್ದೋಷವಾದ ನಿತ್ಯಸುಖವನ್ನು ತಾನಪೇಕ್ಷಿಸುವೆನೆಂದು ಹೇಳಿದರು.

**ಟೀ||** ಹೇ ಭವವಿಭೋ!-ಎಲೈ ವ್ಯಾಪಕನಾದ-ದೇವನೇ!, ಹೇ ಶಂಕರ!-ಎಲೈ ಸುಖಕರನೆ!, ಅಹಂ ನಾನು, ತ್ವತ್ಪೂಜಾಂ, ತ್ವತ್-ನಿನ್ನ, ಪೂಜಾಂ-ಪೂಜೆಯನ್ನು, ಕರೋಮಿ - ಮಾಡುತ್ತೇನೆ, ಸಪದಿ-ತಕ್ಷಣದಲ್ಲಿ, ಮೇ-ನನಗೆ, ಸುಖದಃ-ಸುಖವನ್ನು ಕೊಡುವಂಥಾವನಾಗುವಿ, ವಿಧಿತ್ವಂ - ಬ್ರಹ್ಮತ್ವವನ್ನಾದರೂ, ವಿಷ್ಣುತ್ವಂ - ವಿಷ್ಣುತ್ವವನ್ನಾದರೂ, ತಸ್ಯಾಃ-ಆ ಪೂಜೆಗೆ, ಫಲಂ-ಫಲವು, ಇತಿ-ಎಂಬದಾಗಿ, ದಿಶಸಿ-ಕೊಡುತ್ತಲಿದ್ದಿಯಲ್ಲವೆ? ಹಾಗಾದರೆ, ಪುನಃ-ತಿರಿಗಿ, ತ್ವಾಂ-ನಿನ್ನನ್ನು, ದ್ರಷ್ಟುಂ ನೋಡುವುದಕ್ಕೋಸ್ಕರವಾಗಿ, ದಿವಿ-ಆಕಾಶದಲ್ಲಿಯೂ, ಭುವಿ-ಭೂಮಿಯಲ್ಲಿಯೂ, ಪಕ್ಷಿಮೃಗತಾಂ-ಪಕ್ಷಿತ್ವವನ್ನೂ ಮೃಗತ್ವವನ್ನೂ, ವಹನ್-ಧರಿಸಿದಂಥಾವನಾಗಿ, ತ್ವಾಂ-ನಿನ್ನನ್ನು, ಅದೃಷ್ಟ್ವಾ-ನೋಡದೆ, ತತ್-ಅದರಿಂದುಂಟಾದ ಖೇದಂ-ದುಃಖವನ್ನು, ಕಥಮಿವಸಹೇ-ಹೇಗೆತಾನೆ

ಸಹಿಸುವೆನು, ಎಂದರೆ ಬ್ರಹ್ಮತ್ವವು ವಿಷ್ಣುತ್ವವು ಈ ಎರಡೂ, ನಿನ್ನ ಪೂಜೆಗೆ ಫಲವಾಗಿ ಇದ್ದರೂ, ಅವರಿಬ್ಬರೂ ಒಂದು ಕಾಲದಲ್ಲಿ ನಿನ್ನ ಶಿರಸ್ಸನ್ನೂ ಪಾದವನ್ನೂ ನೋಡುತ್ತೇವೆಂದು ಪ್ರತಿಜ್ಞೆಮಾಡಿಕೊಂಡು ನಿನ್ನ ಬಳಿಗೆಬಂದು ಬ್ರಹ್ಮನು ಹಂಸರೂಪವನ್ನೂ ವಿಷ್ಣುವು ವರಾಹರೂಪವನ್ನೂ ಧರಿಸಿ ಆಕಾಶದಲ್ಲಿಯೂ, ಭೂಮಿಯಲ್ಲಿಯೂ ಪ್ರವೇಶಿಸಿ ನೋಡಿದರು, ಇವರಿಗೆ ತಲೆಯೂ ಪಾದವೂ ಸಿಕ್ಕದೆ ಹೋದುದರಿಂದ ತನಗೆ ಬ್ರಹ್ಮತ್ವವು ವಿಷ್ಣುತ್ವವು ಬಂದರೂ ನಿನ್ನ ದರ್ಶನವು ದೊರೆಯದೆಂದು ಭಾವವು.

**ಕದಾವಾ ಕೈಲಾಸೇ ಕನಕಮಣಿಸೌಧೇ ಸಹಗಣೈ |**
**ರ್ವಸರ್ಞಂಭೋರಗ್ರೇಸ್ಫುಟಘಟಿತಮೂರ್ಧಾಂಜಲಿಪುಟಃ||**
**ವಿಭೋ! ಸಾಂಬ ಸ್ವಾಮಿರ್ಞ ಪರಮಶಿವ ಪಾಹೀತಿ ನಿಗದ೯ |**
**ವಿಧಾತ್ಯಾಣಾಂ ಕಲ್ಪಾ೯ ಕ್ಷಣಮಿವ ವಿನೇಷ್ಯಾಮಿ ಸುಖತಃ||**

ಅವತಾರಿಕೆ—ಇಷ್ಟು ಗ್ರಂಥಗಳಿಂದ ಶಿವಭಜನೆಯೇ ಸರ್ವೋತ್ತಮವೆಂದು ಸಾಧಿಸಿ ಅದರ ಉತ್ತಮವಾದ ರೀತಿಯನ್ನು ಹೇಳುತ್ತಾರೆ.

ಟೀ|| ಕೈಲಾಸೆ-ಕೈಲಾಸಪರ್ವತದಲ್ಲಿ, ಕನಕಮಣಿಸೌಧೆ-ಸ್ವರ್ಣರತ್ನಮಯವಾದ ಮಂದಿರದಲ್ಲಿ, ಗಣೈಸ್ಸಹ - ಪ್ರಮಥಗಣಗಳೊಂದಿಗೆ, ವಸ೯-ವಾಸಮಾಡಿದವನಾಗಿ, ಶಂಭೋಃ-ಪರಮೇಶ್ವರನ, ಅಗ್ರೇ-ಸಮ್ಮುಖದಲ್ಲ, ಸ್ಫುಟ-ಗಟ್ಟಿಯಾಗಿ, ಘಟಿತ-ಹಿಡಿಯಲ್ಪಟ್ಟಂತಾ, ಮೂರ್ದಾಂಜಲಿಪುಟಃ-ತಲೆಯಮೇಲಿನ ಅಂಜಲಿಬಂಧವುಳ್ಳವನಾಗಿ, ಅಹಂ-ನಾನು, ಹೇ ವಿಭೋ!-ಎಲೈ ವ್ಯಾಪಕನೇ!, ಹೇ ಸಾಂಬ!-ಎಲೈ ಪಾರ್ವತೀಸಮೇತನೇ!, ಹೇ ಸ್ವಾಮಿ೯!-ಎಲೈ ಪ್ರಭುವೇ!, ಹೇಪ ರಮಶಿವ!-ಎಲೈ ಪರಮೇಶ್ವರನೇ!, ಪಾಹಿ-ರಕ್ಷಿಸು, ಇತಿ-ಎಂಬದಾಗಿ, ನಿಗದ೯-ಹೇಳುತ್ತಾ, ಸುಖತಃ-ಆನಂದಿಸುವಂಥಾವನಾಗಿ, ವಿಧಾತೃಣಾಂ-ಅನೇಕ ಬ್ರಹ್ಮರು

ಗಳ, ಕಲ್ಪಾನ್ - ಕಲ್ಪಗಳನ್ನು, ಕ್ಷಣಮಿವ - ಕ್ಷಣದೋಪಾದಿಯಲ್ಲಿ ಕದಾವಾ-ಯಾವಾಗ, ನೇಷ್ಯಾಮಿ - ಕಳೆಯುವೆನೋ; ಎಂದರೆ ನಿನ್ನ ಭಜನೆಯಿಂದ ನಿತ್ಯಾನಂದ ಸ್ಥಿತಿಯನ್ನು ಯಾವಾಗಹೊಂದುವೆನೋ ಎಂದು ಭಾವವು.

**ಸ್ತವೈರ್ಬ್ರಹ್ಮಾದೀನಾಂ ಜಯಜಯವಚೋಭಿರ್ನಿಯಮಿನಾಂ।**
**ಗಣಾನಾಂ ಕೇಳೀಭಿರ್ಮದಕಲಮಹೋಕ್ಷಸ್ಯ ಕಕುದಿ॥**
**ಸ್ಥಿತಂ ನೀಲಗ್ರೀವಂ ತ್ರಿನಯನಮುಮಾಶ್ಲಿಷ್ಟವಪುಷಂ।**
**ಕದಾ ತ್ವಾಂ ಪಶ್ಯೇಯಂ ಕರಧೃತ ಮೃಗಂ ಖಂಡಪರಶುಮ್॥**

ಅವತಾರಿಕೆ—ಬೇರೊಂದು ಬಗೆಯಾಗಿ ಭಜನಾನಂದವನ್ನು ಹೇಳುತ್ತಾರೆ.

ಟೀ॥ ಬ್ರಹ್ಮಾದೀನಾಂ - ಬ್ರಹ್ಮ ಮೊದಲಾದ ದೇವರುಗಳ, ಸ್ತವೈಃ-ಸ್ತೋತ್ರಗಳಿಂದಲೂ, ನಿಯಮಿನಾಂ-ಯೋಗಿಗಳ, ಜಯಜಯ ವಚೋಭಿಃ-ಜಯವಿಜಯೀಭವ ಎಂಬುವ ವಾಕ್ಕುಗಳಿಂದಲೂ, ಗಣಾನಾಂ-ಪ್ರಮಥಗಣಗಳ, ಕೇಳೀಭಿಃ-ಕಳಕಳ ಶಬ್ದಗಳಿಂದಲೂ, ಮದಕಲ ಮಹೋಕ್ಷಸ್ಯ-ಮದ-ಸಂತೋಷದಿಂದ, ಕಲ-ಗಂಭೀರಧ್ವನಿಯುಳ್ಳಂಥಾ, ಮಹೋಕ್ಷಸ್ಯ, ನಂದಿಯ, ಕಕುದಿ - ಬೆನ್ನಿನಲ್ಲಿ, ಸ್ಥಿತಂ - ಕುಳಿತಿರುವ, ನೀಲಗ್ರೀವಂ-ಕಪ್ಪಾದ ಕಂಠವುಳ್ಳಂಥಾ, ತ್ರಿನಯನಂ-ಮೂರು ಕಣ್ಣುಗಳನ್ನುಳ್ಳಂಥಾ, ಉಮಾಶ್ಲಿಷ್ಟವಪುಷಂ, ಉಮಾ-ಪಾರ್ವತೀದೇವಿಯಿಂದ, ಆಶ್ಲಿಷ್ಟ-ಆಲಿಂಗಿತವಾದ, ವಪುಷಂ-ಶರೀರವುಳ್ಳಂಥಾ, ಕರಧೃತ ಮೃಗಂ, ಕರ-ಕೈಯಿಂದ, ಧೃತ-ಧರಿಸಲ್ಪಟ್ಟ, ಮೃಗಂ-ಮೃಗವುಳ್ಳಂಥಾ, ಖಂಡಪರಶುಂ-ಪರಶು-ಎಂಬಆಯುಧವುಳ್ಳಂಥಾ,ತ್ವಾಂ-ನಿನ್ನನ್ನು,ಕಾದಾ-ಯಾವಾಗ ಪಶ್ಯೇಯಂ-ನೋಡುವೆನೋ; ಎಂದರೆ ಶಿವರೂಪ ಸಾಕ್ಷಾತ್ಕಾರದಲ್ಲಿ ತನ್ನ ಅಪೇಕ್ಷೆಯ ಅತಿಶಯವನ್ನು ತೋರಿಸಿದರೆಂದು ಭಾವವು.

**ಕದಾ ವಾ ತ್ವಾಂ ದೃಷ್ಟ್ವಾ ಗಿರಿಶ ತವ ಭವ್ಯಾಂಘ್ರಿಯುಗಳಂ ।
ಗೃಹೀತ್ವಾ ಹಸ್ತಾಭ್ಯಾಂ ಶಿರಸಿ ನಯನೇ ವಕ್ಷಸಿ ವಹರ್ ॥
ಸಮಾಶ್ಲಿಷ್ಯಾಘ್ರಾಯ ಸ್ಫುಟಜಲಜಗಂಧಾರ್ ಪರಿಮಳಾ ।
ನಲಭ್ಯಾಂ ಬ್ರಹ್ಮಾದ್ಯೈರ್ಮುದಮನುಭವಿಷ್ಯಾಮಿ ಹೃದಯೇ ॥**

ಅವತಾರಿಕೆ—ಮತ್ತು ಬೇರೊಂದು ಬಗೆಯಾಗಿಯೂ ಈಶ್ವರ ಸೇವಾ ಪ್ರಾರ್ಥನೆಯನ್ನು ಹೇಳುತ್ತಾರೆ.

ಟೀ|| ಹೇ ಗಿರೀಶ!-ಎಲೈ ಕೈಲಾಸವಾಸಿಯೇ!, ತ್ವಾಂ-ನಿನ್ನನ್ನು, ದೃಷ್ಟ್ವಾ-ಸಾಕ್ಷಾತ್ಕರಿಸಿ, ತವ-ನಿನ್ನ, ಭವ್ಯಾಂಘ್ರಿಯುಗಳಂ, ಭವ್ಯ-ಮಂಗಳಕರವಾದ, ಅಂಘ್ರಿ-ಚರಣಗಳ, ಯುಗಳಂ-ಜೊತೆಯನ್ನು, ಹಸ್ತಾಭ್ಯಾಂ-ಕೈಗಳಿಂದ, ಗೃಹೀತ್ವಾ-ಹಿಡಿದು, ಶಿರಸಿ-ಶಿರಸ್ಸಿನಲ್ಲಿಯೂ, ನಯನೇ-ಕಣ್ಣಿನಲ್ಲಿಯೂ. ವಕ್ಷಸಿ-ಎದೆಯಲ್ಲಿಯೂ, ವಹನ್-ವಹಿಸಿದಂಥಾವನಾಗಿ, ಸಮಾಶ್ಲಿಷ್ಯ-ಆಲಿಂಗನ ಮಾಡಿಕೊಂಡು, ಸ್ಫುಟಜಲಜಗಂಧಾನ್, ಸ್ಫುಟ-ವಿಕಸಿಸಿದ, ಜಲಜ-ಕಮಲಗಳ, ಗಂಧಾನ್ - ಸುಗಂಧದೋಪಾದಿಯಲ್ಲಿ ಇರುವ, ಪರಿಮಳಾನ್-ಪರಿಮಳಗಳನ್ನು, ಆಘ್ರಾಯ-ಗ್ರಹಿಸಿ, ಬ್ರಹ್ಮಾದ್ಯೈಃ-ಬ್ರಹ್ಮ ಮೊದಲಾದವರಿಂದ, ಅಲಭ್ಯಾಂ-ಹೊಂದಲಶಕ್ಯವಾದ, ಮುದಂ-ಸಂತೋಷವನ್ನು, ಹೃದಯೇ - ಹೃದಯದಲ್ಲಿ, ಕದಾ-ಯಾವಾಗ, ಅನುಭವಿಷ್ಯಾಮಿ-ಅನುಭವಿಸುವೆನೋ; ಎಂದರೆ ಪರಮೇಶ್ವರನ ಕೈಂಕರ್ಯ ವಿಶೇಷದಲ್ಲಿ ತನ್ನ ಬಹಳವಾದ ಇಚ್ಛೆಯಂ ತಿಳಿಸಿದರೆಂದು ಭಾವವು.

**ಕರಸ್ಥೇ ಹೇಮಾದ್ರೌ ಗಿರಿಶ! ನಿಕಟಸ್ಥೇ ಧನಪತೌ ।
ಗೃಹಸ್ಥೇ ಸ್ವರ್ಭೂಜಾಽಮರಸುರಭಿ ಚಿಂತಾಮಣಿಗಣೇ ॥
ಶಿರಸ್ಥೇ ಶೀತಾಂಶೌ ಚರಣಯುಗಳಸ್ಥೇಽಖಿಲಶುಭೇ ।
ಕಮರ್ಥಂ ದಾಸ್ಯೇಽಹಂ? ಭವತು, ಭವದರ್ಥಂ ಮಮ ಮನಃ**

ಅವತಾರಿಕೆ—ಪರಮೇಶ್ವರನು ಸರ್ವೈಶ್ವರ್ಯವುಳ್ಳಂಥಾವನಾದ ಕಾರಣ ಅವನನ್ನು ಪೂಜಿಸುವ ವಿಷಯದಲ್ಲಿ ತಾನು ಅರ್ಪಿಸತಕ್ಕ ವಸ್ತು ಬೇರೊಂದು ಇಲ್ಲವೆಂದು ಹೇಳುತ್ತಾರೆ.

ಟೀ|| ಹೇ ಗಿರಿಶ!-ಎಲೈ ಕೈಲಾಸವಾಸಿಯೆ!, ಹೇಮಾದ್ರೌ-ಮಹಾ ಮೇರುಪರ್ವತವು, ತವ-ನಿನ್ನ, ಕರಸ್ಥೇ-ಕೈಯಲ್ಲಿ ಇರಲಾಗಿಯೂ, ಧನಪತೌ-ಕುಬೇರನು, ನಿಕಟಸ್ಥೇ-ಸಮೀಪದಲ್ಲಿರುವಾಗಲೂ, ಸ್ವರ್ಭೂಜಾಮರಸುರಭಿ ಚಿಂತಾಮಣಿಗಣೆ ಸ್ವರ್ಭೂಜ-ಕಲ್ಪವೃಕ್ಷವು, ಅಮರಸುರಭಿ-ಕಾಮಧೇನುವು, ಚಿಂತಾಮಣಿ-ಚಿಂತಾಮಣಿಗಳು, ಇವುಗಳ ಗಣೇ-ಸಮೂಹವು, ಗೃಹಸ್ಥೇ - ಮನೆಯಲ್ಲಿರುವಾಗಲೂ, ಶೀತಾಂಶೌ-ಚಂದ್ರನು, ಶಿರಸ್ಥೇ-ತಲೆಯಲ್ಲಿರುವಾಗಲೂ ಅಖಿಲಶುಭೇ-ಸಕಲಶುಭವು, ಚರಣಯುಗಳಸ್ಥೇ-ಪಾದಗಳಲ್ಲಿರುವಾಗಲೂ, ಅಹಂ-ನಾನು, ಕಮರ್ಥಂ-ಯಾವ ಅರ್ಥವನ್ನು (ಹೊಸವಸ್ತುವನ್ನು,) ದಾಸ್ಯೇ ಕೊಡುವೆನು?, ಭವತು-ಆಗಲಿ, ಬಾಧಕವಿಲ್ಲ ಮಮ-ನನ್ನ, ಮನಃ-ಮನಸ್ಸನ್ನು, ಭವದರ್ಥಂ-ನಿನಗೋಸ್ಕರವಾಗಿ, ದಾಸ್ಯೇ-ಒಪ್ಪಿಸುತ್ತೇನೆ; ಇದರಿಂದ ಸಕಲಸಂಪತ್ತುಳ್ಳ ದೇವರಿಗೆ ಅರ್ಪಿಸತಕ್ಕ ವಸ್ತುವು ತನಗೆ ಬೇರೊಂದು ಇಲ್ಲವಾಗಿ ತನ್ನ ಮನಸ್ಸನ್ನೇ ಅರ್ಪಿಸಿದರೆಂದು ಭಾವವು.

**ಸಾರೂಪ್ಯಂ ತವಪೂಜನೇಶಿವಮಹಾದೇವೇತಿಸಂಕೀರ್ತನೆ |**
**ಸಾಮೀಪ್ಯಂಶಿವಭಕ್ತಿಧುರ್ಯಜನತಾಸಾಂಗತ್ಯಸಂಭಾಷಣೆ ||**
**ಸಾಲೋಕ್ಯಂಚಚರಾಚರಾತ್ಮಕತನುಧ್ಯಾನೇಭವಾನೀಪತೇ ! |**
**ಸಾಯುಜ್ಯಂ ಮಮ ಸಿದ್ಧ ಮತ್ರ ಭವತಿ ಸ್ವಾಮಿನ್ ಕೃತಾರ್ಥೋಸ್ಮ್ಯಹಂ||** ||೨೮||

ಅವತಾರಿಕೆ—ಬಹುವಿಧವಾದ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂದು ನಾಲ್ಕು ವಿಧವಾದ ಮುಕ್ತಿಯು ಉಂಟಾ

ಗುತ್ತೆಂದು ಹೇಳುತ್ತಾರೆ.

**ಟೀ||** ಹೇ ಶಿವ!-ಎಲೈ ಮಂಗಳಕರನೆ!, ತವ-ನಿನ್ನ, ಪೂಜನೇ-ಪೂಜೆಯಲ್ಲಿ, ಸಾರೂಪ್ಯಂ-ಸಾರೂಪ್ಯವೆಂಬ ಮುಕ್ತಿಯು, ಮಹಾದೇವೇತಿ-ಮಹಾದೇವಾ ಎಂಬದಾಗಿ, ಸಂಕೀರ್ತನೇ-ಸ್ತುತಿಸುವದರಲ್ಲಿ, ಸಾಮೀಪ್ಯಂ ನಿನ್ನ ಸಸ್ನಿಧಿ ಎಂಬ ಮುಕ್ತಿಯು, ಶಿವಭಕ್ತಿ ಧುರ್ಯಜನತಾ-ಸಾಂಗತ್ಯ ಸಂಭಾಷಣೇ-ಶಿವಭಕ್ತಿಯಲ್ಲಿ ಶ್ರೇಷ್ಠರಾದ ಜನಗಳ ಸಹವಾಸವೇನು, ಸಂಭಾಷಣವೇನು ಇವುಗಳಲ್ಲಿ, ಸಾಲೋಕ್ಯಂ-ಸಾಲೋಕ್ಯವೆಂಬ ಮುಕ್ತಿಯು, ಚರಾಚರಾತ್ಮಕ ತನುಧ್ಯಾನೇ-ಚರಾಚರ, ಸ್ಥಾವರಜಂಗಮ ರೂಪವಾದ, ಆತ್ಮಕತನುಧ್ಯಾನೇ-ನಿನ್ನ ವಿರಾಟ್ಸ್ವರೂಪ ಧ್ಯಾನದಲ್ಲಿ, ಸಾಯುಜ್ಯಂ-ಸಾಯುಜ್ಯವೆಂಬ ಮುಕ್ತಿಯು, ಮಮ-ನನಗೆ, ಸಿದ್ಧಂ-ಸಿದ್ಧವಾಗಿ, ಭವತಿ-ಆಗುತ್ತದೆ, ಹೇ ಸ್ವಾಮಿನ್!-ಎಲೈ ಸ್ವಾಮಿಯೆ!, ಅತ್ರ-ಈ ಲೋಕದಲ್ಲಿಯೇ, ಅಹಂ-ನಾನು, ಕೃತಾರ್ಥಃ-ಕೃತಾರ್ಥನಾಗಿ, ಅಸ್ಮಿ-ಆಗುತ್ತಲಿದೇನೆ, ಎಂದರೆ ನಿನ್ನ ಸೇವೆಯಿಂದ ನನಗೆ ಸರ್ವಫಲವೂ ಉಂಟಾಗುತ್ತೆಂದು ಭಾವವು.

**ತ್ವತ್ಪಾದಾಂಬುಜ ಮರ್ಚಯಾಮಿ ಪರಮಂ ತ್ವಾಂ ಚಿಂತಯಾ**
**[ಮ್ಯನ್ವಹಂ |**
**ತ್ವಾಮೀಶಂ-ಶ್ಶರಣಂ ವ್ರಜಾಮಿ ವಚಸಾ ತ್ವಾಮೇವ ಯಾಚೇ ವಿ**
**[ಭೋ ||**
**ವೀಕ್ಷಾಂ ಮೇ ದಿಶ ಚಾಕ್ಷುಷೀಂ ಸಕರುಣಾಂ ದಿವ್ಯೈಶ್ಚಿರಂ ಪ್ರಾ**
**[ರ್ಥಿತಾಂ |**
**ಶಂಭೋ! ಲೋಕಗುರೋ! ಮದೀಯಮನಸಸ್ಸೌಖ್ಯೋಪದೇ**
**[ಶಂಕುರು ||೨೯||**

ಅವತಾರಿಕೆ—ಹೀಗೆ ನಾಲ್ಕು ವಿಧವಾದ ಮುಕ್ತಿಯನ್ನು ಹೇಳಿ

ತನಗೆ ನಿತ್ಯಾನಂದ ರೂಪವಾದ ಸ್ಥಿತಿಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸುತ್ತಾರೆ.

**ಟೀ**|| ಹೇ ಶಂಭೋ!-ಎಲೈ ಸುಖಪ್ರದನೆ!, ಹೇಲೋಕಗುರೋ!-ಎಲೈ ಲೋಕಗುರುವೆ! ಅಹಂ-ನಾನು, ತ್ವತ್ಪಾದಾಂಬುಜಂ-ನಿನ್ನ ಪಾದ ಕಮಲವನ್ನು, ಅರ್ಚಯಾಮಿ-ಅರ್ಚಿಸುತ್ತಲಿದೇನೆ, ಅನ್ವಹಂ-ಪ್ರತಿದಿನವು, ಪರಮಂ-ಸರ್ವೋತ್ಕೃಷ್ಟನಾದ, ತ್ವಾಂ-ನಿನ್ನನ್ನು, ಚಿಂತಯಾಮಿ-ಧ್ಯಾನಿಸುತಲಿದೇನೆ; ಈಶಂ ಸರ್ವೇಶ್ವರನಾದ, ತ್ವಾಂ-ನಿನ್ನನ್ನು, ಶರಣಂ-ರಕ್ಷಕನನ್ನಾಗಿಯೂ, ವ್ರಜಾಮಿ - ಹೊಂದುತ್ತೇನೆ; ಹೇವಿಭೋ!-ಎಲೈ ವ್ಯಾಪಕನೆ!, ವಚಸಾ-ಮಾತಿನಿಂದ, ತ್ವಾಮೇವ ನಿನ್ನನ್ನೇ, ಯಾಚೆ ಪ್ರಾರ್ಥಿಸುತ್ತಲಿದೇನೆ, ದಿವ್ಯೈಃ-ದೇವತೆಗಳಿಂದ, ಚಿರಂ-ಬಹುಕಾಲ, ಪ್ರಾರ್ಥಿತಾಂ - ಪ್ರಾರ್ಥಿಸಲ್ಪಟ್ಟಂತಾ, ಸಕರುಣಾಂ - ದಯವುಳ್ಳಂಥಾ, ಚಾಕ್ಷುಷೀಂ-ಕಣ್ಣುಗಳ ಸಂಬಂಧವಾದ, ವೀಕ್ಷಾಂ - ನೋಟವನ್ನು ಮಮ-ನನಗೋಸ್ಕರ, ದಿಶ-ಕೊಡು, ಮದೀಯಮನಸಃ-ನನ್ನ ಮನಸ್ಸಿಗೆ, ಸೌಖ್ಯೋಪದೇಶಂ - ಆನಂದಾನುಗ್ರಹವನ್ನು, ಕುರು-ಮಾಡು; ಎಂದರೆ ನಾನು ನಿನ್ನ ಭಜನೆಯನ್ನು ಮಾಡಿದರೂ ಅದನ್ನಂಗೀಕರಿಸಿ ನನಗೆ ನಿತ್ಯಾನಂದವಂ ಕೊಡುವವನು ನೀನೇಹೊರ್ತು ಬೇರೆ ಯಾರೂ ಇಲ್ಲವೆಂದು ಭಾವವು.

**ವಸ್ತ್ರೋದ್ಧೂತವಿಧೌ ಸಹಸ್ರಕರತಾ ಪುಷ್ಪಾರ್ಚನೇ ವಿಷ್ಣುತಾ।**
**ಗಂಧೇಗಂಧವಹಾತ್ಮತಾನ್ನ ಪಚನೇ ಬರ್ಹಿರ್ಮುಖಾಧ್ಯಕ್ಷತಾ।**
**ಪಾತ್ರೇಕಾಂಚನಗರ್ಭತಾಸ್ತಿಮಯಿಚೇದ್ಬಾಲೇಂದು ಚೂಡಾ [ಮಣೇ ।**
**ಶುಶ್ರೂಷಾಂ ಕರವಾಣಿ ತೇ ಪಶುಪತೇ! ಸ್ವಾಮಿನ್! ತ್ರಿಲೋಕೀ [ಗುರೋ! ॥೩೦॥**

ಅವತಾರಿಕೆ__ಅನೇಕ ದೇವಶ್ರೇಷ್ಠರುಗಳು ಮಾಡತಕ್ಕ ನಿನ್ನ ಪೂಜೆಯನ್ನು ಅಲ್ಪನಾದ ನಾನು ಹೇಗೆ ಮಾಡುವೆನೆಂದು ಹೇಳುತ್ತಾರೆ.

ಟೀ|| ಹೇ ಬಾಲೇಂದುಚೂಡಾಮಣೇ!-ಎಲೈ ಬಾಲಚಂದ್ರಧಾರಿಯೆ!, ಹೇ ಪಶುಪತೇ!-ಎಲೈ ಜಗತ್ಪತಿಯೆ!, ಹೇ ಸ್ವಾಮಿನ್!-ಎಲೈ ಸ್ವಾಮಿಯೆ!, ತ್ರಿಲೋಕೀಗುರೊ!-ಎಲೈ ಮೂರುಲೋಕಕ್ಕೆ ಗುರುವೆ!, ತವ ನಿನ್ನ, ವಸ್ತ್ರೋದ್ಧೂತವಿಧೌ-ವಸ್ತ್ರಸಮರ್ಪಣ ಕಾರ್ಯದಲ್ಲಿ, ಸಹಸ್ರಕರತಾ-ಸೂರ್ಯತ್ವವು, ಪುಷ್ಪಾರ್ಚನೆ-ಪುಷ್ಪಸಮರ್ಪಣದಲ್ಲಿ, ವಿಷ್ಣುತಾ-ವಿಷ್ಣುತ್ವವು, ಗಂಧೆ-ಗಂಧಸಮರ್ಪಣದಲ್ಲಿ, ಗಂಧವಹಾತ್ಮತಾ-ವಾಯುವಾಗಿರೋಣವು, ಅನ್ನಪಚನೇ-ನೈವೇದ್ಯ ಸಮರ್ಪಣದಲ್ಲಿ, ಬರ್ಹಿರ್ಮುಖಾಧ್ಯಕ್ಷತಾ-ದೇವತೆಗಳಿಗೆ ಶ್ರೇಷ್ಠನಾದ ಇಂದ್ರನಾಗಿರೋಣವು, ಪಾತ್ರೆ-ಪಾತ್ರಸಮರ್ಪಣದಲ್ಲಿ, ಕಾಂಚನಗರ್ಭತಾ - ಬ್ರಹ್ಮನಾಗಿರೋಣವು, ಮಯಿ-ನನ್ನಲ್ಲಿ, ಅಸ್ತಿಚೇತ್-ಇದ್ದರೆ, ತೇ-ನಿನಗೆ, ಶುಶ್ರೂಷಾಂ-ಸೇವೆಯನ್ನು, ಕರವಾಣಿ-ಮಾಡುವೆನು, ಇಲ್ಲದಿದ್ದರೆ ಮಾಡಲಾರೆನೆಂದು ಭಾವವು.

ಎಂದರೆ ದಿಗಂಬರನಾದ ದೇವರಿಗೆ ವಸ್ತ್ರಗಳಾದ ದಿಕ್ಕುಗಳನ್ನು ಸೂರ್ಯನು ತನ್ನ ಸಹಸ್ರಕಿರಣಗಳಿಂದ ಪ್ರಕಾಶಗೊಳಿಸುವನಾದ್ದರಿಂದ ವಸ್ತ್ರಸಮರ್ಪಣದಲ್ಲಿ ಸೂರ್ಯನಾಗಬೇಕೆಂದು'ನ್ನೂ, ವಿಷ್ಣುವು ಸಕಲಜಗದ್ವ್ಯಾಪಿಯಾಗಿ ಪುಷ್ಪಗಳಲ್ಲಿ ಪರಿಮಳರೂಪನಾಗಿರುವುದರಿಂದ ಪುಷ್ಪಾರ್ಚನದಲ್ಲಿ ವಿಷ್ಣುವಾಗಬೇಕೆಂದುನ್ನೂ, ವಾಯುವು ಸಕಲ ಸುಗಂಧವನ್ನು ಸೇರಿಸುವನಾದಕಾರಣ ಗಂಧೋಪಚಾರದಲ್ಲ ವಾಯುವಾಗಬೇಕೆಂದುನ್ನೂ ಇಂದ್ರನು ಅಮೃತಾಶನನಾದ್ದರಿಂದ ಪೂಜಕನು ಯಾವ ಅನ್ನವನ್ನು ಭುಜಿಸುತ್ತಾನೋ ಅದೇ ಅನ್ನವೇ ದೇವರಿಗೂ ಎಂಬುವ ನ್ಯಾಯದಿಂದ ನೈವೇದ್ಯಸಮರ್ಪಣದಲ್ಲಿ ಇಂದ್ರನಾಗಬೇಕೆಂದುನ್ನೂ; ಬ್ರಹ್ಮನು ತನ್ನ ತಲೆಯನ್ನೇ ಈಶ್ವರನ ಕೈಯಲ್ಲಿ ಭಿಕ್ಷಾಕಪಾಲವನ್ನಾಗಿ ಕೊ

ಟ್ಟನಾದಕಾರಣ ಪಾತ್ರಾರ್ಪಣದಲ್ಲಿ ಬ್ರಹ್ಮನಾಗಬೇಕೆಂದು ಹೇಳಿದರೆಂದು ಭಾವವು.

**ನಾಲಂ ವಾ ಪರಮೋಪಕಾರಕಮಿದಂತ್ವೇಕಂ! ಪಶೂನಾಂಪತೇ! |**
**ಪಶ್ಯನ್ ಕುಕ್ಷಿಗತಾನ್ ಚರಾಚರಗಣಾನ್ ಬಾಹ್ಯಸ್ಥಿತಾನ್ ರಕ್ಷಿತುಂ [ವಸ್ ||**
**ಸರ್ವಾಮರ್ತ್ಯ ಪಲಾಯನೌಷಧಮತಿಜ್ವಾಲಾಕರಂ ಭೀಕರಂ |**
**ನಿಕ್ಷಿಪ್ತಂಗರಳಂ ಗಳೇ ನ ಗಿಳಿತಂ ನೋದ್ಗೀರ್ಣಮೇವ ತ್ವಯಾ|| [೩೧**

ಅವತಾರಿಕೆ—ಪರಮೇಶ್ವರನಲ್ಲಿರುವ ಸರ್ವಲೋಕರಕ್ಷಕತ್ವವು ಸರ್ವ ಶಕ್ತಿಯು ಈ ಗುಣಗಳಿಂದ ಅವನ ಭಜನೆಯೇ ಅವಶ್ಯ ಮಾಡಬೇಕೆನ್ನುತ್ತಾರೆ.

ಟೀ|| ಹೇ ಪಶೂನಾಂಪತೇ!-ಎಲೈ ಪಶುಪತಿಯೆ!, ಕುಕ್ಷಿಗತಾನ್-ನಿನ್ನ ಹೊಟ್ಟೆಯಲ್ಲಿರುವ, ಮತ್ತು ಬಾಹ್ಯಸ್ಥಿತಾನ್-ಹೊರಗೆ ಇರುವ. ಚರಾಚರಗಣಾನ್-ಸ್ಥಾವರಜಂಗಮಗಳನ್ನು, ರಕ್ಷಿತುಂ-ರಕ್ಷಿಸುವದಕ್ಕಾಗಿ, ಪಶ್ಯನ್-ಆಲೋಚಿಸಿದವನಾಗಿ, ಸರ್ವಾಮರ್ತ್ಯಪಲಾಯನೌಷಧಂ-ಸರ್ವಾಮರ್ತ್ಯ-ಸರ್ವ ದೇವತೆಗಳನ್ನು, ಪಲಾಯನ ಓಡಿಸುವುದರಲ್ಲಿ, ಔಷಧಂ-ಔಷಧರೂಪವಾದ, ಅತಿಜ್ವಾಲಾಕರಂ-ಅಧಿಕವಾದ ಜ್ವಾಲೆಗಳನ್ನುಳ್ಳಂಥಾ, ಭೀಕರಂ-ಭಯಂಕರವಾದ, ಗರಳಂ-ವಿಷವು, ತ್ವಯಾ-ನಿನ್ನಿಂದ, ನ ಗಿಳಿತಂ - ನುಂಗಲ್ಪಡಲಿಲ್ಲ, ನೋದ್ಗೀರ್ಣಮೇವ - ಕಕ್ಕಲೂಪಡಲಿಲ್ಲ; ಆದರೆ ಗಳೆ-ಕಂಠದಲ್ಲಿ, ನಿಕ್ಷಿಪ್ತಂ-ಇರಿಸಲ್ಪಟ್ಟಿತು; ಪರಮೋಪಕಾರಂ-ಮಹೋಪಕಾರರೂಪವಾದ, ಇದಮೇಕಂ-ಇದೊಂದೇ, ನಾಲಂವಾ-ಸಾಲದೇನು? ಎಂದರೆ ಈಶ್ವರನು ಸರ್ವ ಜಗದ್ರಕ್ಷಕನು, ವಿಚಿತ್ರ ಶಕ್ತಿಯುಳ್ಳವನು ಎಂಬುದಕ್ಕೆ ಈ ನಿದರ್ಶನವೇ ಸಾಕೆಂದು ತಾತ್ಪರ್ಯವು.

**ಜ್ವಾಲೋಗ್ರಸ್ಸಕಲಾಮರಾತಿಭಯದಃಕ್ಷ್ವೇಳಃಕಥಂವಾತ್ವಯಾ**
**ದೃಷ್ಟಃ ಕಿಂ ಚ ಕರೆಧೃತಃ ಕರತಲೆ ಕಿಂ ಪಕ್ವಜಂಬೂಫಲವ್‌||**
**ಜಿಹ್ವಾಯಾಂ ನಿಹಿತಶ್ಚಸಿದ್ಧಘುಟಿಕಾ ವಾ ಕಂಠದೇಶೇಭೃತಃ।**
**ಕಿಂ ತೇನೀಲಮಣಿರ್ವಿಭೂಷಣಮಯಂ ಶಂಭೋ! ಮಹಾತ್ಮನ್**
**[ವದ ||೩೨||**

ಅವತಾರಿಕೆ__ಈಶ್ವರನು ವಿಷಪಾನಮಾಡಿದ ಬಗೆಯನ್ನು ಮೂರುವಿಧವಾಗಿ ಉಲ್ಲೇಖಿಸುತ್ತಾರೆ.

ಟೀ|| ಹೇ ಶಂಭೋ!-ಎಲೈ ಸುಖಕರನೇ!, ಹೇ ಮಹಾತ್ಮನ್!-ಎಲೈ ಮಹಾತ್ಮನೆ!, ಜ್ವಾಲೋಗ್ರಃ ಜ್ವಾಲೆಗಳಿಂದ ಉಗ್ರವಾಗಿಯೂ, ಸಕಲಾಮರಾತಿಭಯದಃ-ಸಕಲ ದೇವತೆಗಳಿಗೆ ಅತಿ ಭಯಂಕರವಾಗಿಯೂ ಇರುವ, ಅಯಂ-ಈ, ಕ್ಷ್ವೇಳಃ-ವಿಷವು. ತ್ವಯಾ - ನಿನ್ನಿಂದ, ಕಥಂವಾ-ಹೇಗೆ ದೃಷ್ಟಃ ನೋಡಲ್ಪಟ್ಟಿತು, ಕಿಂಚ-ಏನೆಂದು, ಕರೆ-ಕೈಯಲ್ಲಿ ಧೃತಃ-ಧರಿಸಲ್ಪಟ್ಟಿತು, ಮತ್ತು, ಪಕ್ವಜಂಬೂಫಲಂ-ಕಳಿತ ನೇರಳೇಹಣ್ಣೆಂಬದಾಗಿ, ಕರತಲೆ-ಅಂಗೈಯಲ್ಲಿ, ಧೃತಃಕಿಂ - ಧರಿಸಲ್ಪಟ್ಟಿತೊ, ಸಿದ್ಧಘುಟಿಕಾವಾ-ಸಿದ್ಧರಗುಳಿಗೆ ಎಂಬುದಾಗಿ, ಜಿಹ್ವಾಯಾಂ-ನಾಲಿಗೆಯಲ್ಲಿ, ನಿಹಿತಶ್ಚ ಕಿಂ-ಇರಿಸಲ್ಪಟ್ಟಿತೊ, ವಿಭೂಷಣಂ-ಅಲಂಕಾರವಾದ ನೀಲಮಣಿಃ-ನೀಲರತ್ನವೆಂಬುದಾಗಿ, ತೇ-ನಿನ್ನ, ಕಂಠದೇಶೆ-ಕೊರಳಿನ ಪ್ರದೇಶದಲ್ಲಿ, ಭೃತಃಕಿಂ-ಭರಿಸಲ್ಪಟ್ಟಿತೇನು, ವದ-ಹೇಳು; ಎಂದರೆ ಆ ಕ್ರೂರವಾದ ವಿಷವನ್ನು ಪರಮೇಶ್ವರನು ಅಂಗೈಯಲ್ಲಿ ನೇರಳೇಹಣ್ಣಿನಹಾಗೆಯೂ, ನಾಲಿಗೆಯಲ್ಲಿ ಸಿದ್ಧರಗುಳಿಗೆಯಹಾಗೆಯೂ, ಕೊರಳಿನಲ್ಲಿ ನೀಲರತ್ನದಂತೆಯೂ ಧರಿಸಿದನೆಂದು ಭಾವವು.

**ನಾಲಂವಾ ಸಕೃದೇವ ದೇವ! ಭವತಸ್ಸೇವಾ ನತಿರ್ವಾನುತಿಃ||**
**ಪೂಜಾವಾಸ್ಮರಣಂ ಕಥಾಶ್ರವಣಮಪ್ಯಾಲೋಕನಂಮಾದೃಶಾಂ**

**ಸ್ವಾಮಿನ್ನಸ್ಥಿರದೇವತಾನುಸರಣಾಯಾಸೇನ ಕಿಂ ಲಭ್ಯತೇ।**
**ಕಾ ವಾ ಮುಕ್ತಿರಿತಃ ಕುತೋಭವತಿಚೇತ್ಕಿಂಪ್ರಾರ್ಥನೀಯಂತದಾ**

ಅವತಾರಿಕೆ—ಈಶ್ವರನ ಸೇವೆಯು, ನಮಸ್ಕಾರವು, ಸ್ತೋತ್ರವು, ಪೂಜೆಯು, ಸ್ಮರಣವು, ಕಥಾಶ್ರವಣವು, ಮೂರ್ತಿದರ್ಶನವು, ಈ ವಿಧವಾದ ಭಜನೆಗಳಲ್ಲಿ ಒಂದೊಂದೇ ಸಾಕೆಂದು ಹೇಳುತ್ತಾರೆ.

ಟೀ|| ಹೇ ಸ್ವಾಮಿನ್!-ಎಲೈಸ್ವಾಮಿಯೆ!, ಹೇ ದೇವ!-ಎಲೈ ದೇವನೇ!, ಮಾದೃಶಾಂ-ನಮಂಥವರಿಗೆ, ಭವತಃ-ನಿನ್ನ, ಸೇವಾ-ಕೈಂಕರ್ಯವು, ನತಿಃವಾ - ನಮಸ್ಕಾರವಾದರೂ, ನುತಿಃ - ಸ್ತೋತ್ರವು, ಪೂಜಾವಾ-ಪೂಜೆಯಾದರೂ, ಸ್ಮರಣಂ-ಧ್ಯಾನವಾದರೂ, ಕಥಾಶ್ರವಣಮಪಿ-ಮಾಹಾತ್ಮ್ಯಶ್ರವಣವಾದರೂ, ಆಲೋಕನಂ-ಮೂರ್ತಿದರ್ಶನವಾದರೂ ಸಕೃದೇವ-ಒಂದೇ ಆವರ್ತಿಯಾಗಿದ್ದರೇ, ನಾಲಂ ವಾ-ಸಾಲದೇ ಏನು? ಅಸ್ಥಿರದೇವತಾನುಸರಣಾಯಾಸೇನ-ಅನಿತ್ಯರಾದ ದೇವರುಗಳ ಅನುಸರಣೆಯ ಶ್ರಮದಿಂದ, ಕಿಂ ಲಭ್ಯತೇ-ಏನು ದೊರೆಯುತ್ತದೆ? ಇತಃ-ಇದಕ್ಕಿಂತಲೂ, ಮುಕ್ತಿಃ-ಮುಕ್ತಿಯೆಂಬುದು, ಕಾವಾ-ಆವುದಾದೀತು? ಚೇತ್-ಅದು ಲಭಿಸುವುದಾದರೆ, ಕುತೋಭವತಿ-ಏತರ ದೆಸೆಯಿಂದ ಉಂಟಾಗುತ್ತದೆ. ತದಾ-ಆವಾಗ, ಪ್ರಾರ್ಥನೀಯಂ ಪ್ರಾರ್ಥಿಸತಕ್ಕದು, ಕಿಂ-ಆವುದು ಮಿಗುವುದು! ||೩೩||

**ಕಿಂ ಬ್ರೂಮಸ್ತವಸಾಹಸಂ ಪಶುಪತೇ ಕಸ್ಯಾಸ್ತಿ ಶಂಭೋ! ।**
**ಭವದ್ಧೈರ್ಯಂಚೇದೃಶಮಾತ್ಮನಸ್ಥಿತಿರಿಯಂಚಾನ್ಯೈಃ ಕಥಂ**
**[ಲಭ್ಯತೇ ॥**
**ಭ್ರಶ್ಯದ್ದೇವಗಣಂ ತ್ರಸನ್ಮುನಿಗಣಂ ನಶ್ಯತ್ಪ್ರಪಂಚಂ ಲಯಂ ।**
**ಪಶ್ಯನ್ನಿರ್ಭಯ ಏಕ ಏವ ವಿಹರತ್ಯಾನಂದಸಾಂದ್ರೋ ಭವಾನ್ ॥**

ಅವತಾರಿಕೆ—ಮಹಾಪ್ರಳಯದಲ್ಲಿಯೂ ನೀನೇ ನಿತ್ಯಾನಂದಭರಿತನಸಗಿದ್ದೀಯೆ ಎಂದು ಹೇಳುತ್ತಾರೆ,

ಟೀ|| ಹೇ ಪಶುಪತೇ!-ಎಲೈ ಪಶುಪತಿಯೇ!, ಹೇ ಶಂಭೋ!-ಎಲೈ ಶುಭಕರನೇ!, ತವ-ನಿನ್ನ, ಸಾಹಸಂ-ಸಾಹಸವನ್ನು ಕಿಂ ಬ್ರೂಮಃ-ಏನೆಂದು ಹೇಳುವೆವು, ಈದೃಶಂ - ಇಂತಹ, ಭವದ್ಧೈರ್ಯಂಚ - ನಿನ್ನ ಧೈರ್ಯವು ಸಹ, ಕಸ್ಯಾಸ್ತಿ-ಆರಿಗಿದೆ; ಇಯಂ-ಇಂತಹ ಆತ್ಮನಃ-ನಿನ್ನ, ಸ್ಥಿತಿಃ-ಸ್ಥಿತಿಯು, ಅನ್ಯೈಃ-ಅನ್ಯರಿಂದ, ಕಥಂ ಲಭ್ಯತೇ-ಹೇಗೆ ಹೊಂದಲ್ಪಡುತ್ತದೆ; ಹೇಗೆಂದರೆ, ಭ್ರಶ್ಯದ್ದೇವಗಣಂ, ಭ್ರಶ್ಯತ್ - ಜಾರಿಹೋಗುವ, ದೇವಗಣಂ-ದೇವಸಮೂಹವುಳ್ಳಂಥಾ, ತ್ರಸನ್ಮುನಿಗಣಂ, ತ್ರಸತ್-ಹೆದರುವಂಥಾ, ಮುನಿಗಣಂ-ಮುನಿಗಳ ಸಮೂಹವುಳ್ಳಂಥಾ, ನಶ್ಯತ್ಪ್ರಪಂಚಂ —ನಶ್ಯತ್-ನಶಿಸುವಂಥಾ, ಪ್ರಪಂಚಂ - ಪ್ರಪಂಚವುಳ್ಳ, ಪ್ರಳಯಂ - ಪ್ರಳಯವನ್ನು, ಪಶ್ಯನ್ - ನೋಡುವಂಥಾವನಾಗಿ, ನಿರ್ಭಯಃ-ಭಯವಿಲ್ಲದೆ, ಭವಾನ್-ನೀನು, ಏಕ ಏವ-ಒಬ್ಬನೇ, ಆನಂದಸಾಂದ್ರಃ-ಆನಂದಭರಿತನಾಗಿ, ವಿಹರಸಿ - ವಿಹರಿಸುತ್ತಿದ್ದೀಯೆ; ಎಂದರೆ ಮಹಾಪ್ರಳಯದಲ್ಲಿಯೂ, ನೀನೊಬ್ಬನೇ ಆನಂದಭರಿತನಾಗಿದ್ದೀಯೆ ಎಂದು ಭಾವವು.

**ಯೋಗಕ್ಷೇಮಧುರಂಧರಸ್ಯ ಸಕಲಶ್ರೇಯಃಪ್ರದೋದ್ಯೋಗಿ--**
**[ನೋ|**
**ದೃಷ್ಟಾದೃಷ್ಟಮತೋಪದೇಶಕೃತಿನೋ ಬಾಹ್ಯಾಂತರವ್ಯಾಪಿನಃ**
**ಸರ್ವಜ್ಞಸ್ಯ ದಯಾಕರಸ್ಯ ಭವತಃ ಕಿಂ ವೇದಿತವ್ಯಂ ಮಯಾ।**
**ಶಂಭೋ! ತ್ವಂ ಪರಮಾಂತರಂಗ ಇತಿ ಮೇ ಚಿತ್ತೇಸ್ಮರಾಮ್ಯನ್ವ**
**[ಹಂ||೩೫||**

ಅವತಾರಿಕೆ—ಸರ್ವಜ್ಞನಾದ ನಿನಗೆ ನಾನು ಬಿನ್ನೈಸತಕ್ಕದೇನೆಂದು ಹೇಳುತ್ತಾರೆ.

ಟೀ|| ಹೇ ಶಂಭೋ!-ಎಲೈ ಶುಭಕರನೇ!, ಯೋಗಕ್ಷೇಮಧುರಂಧರಸ್ಯ-ನನ್ನ ಯೋಗಕ್ಷೇಮ-ಗಳ ಎಂದರೆ ಇರುವುದನ್ನು ಕಾಪಾಡಿ ಬೇಕಾದುದನ್ನು ಸಂಪಾದಿಸಿಕೊಡುವ ಭಾರವನ್ನು ವಹಿಸುವಂಥಾ, ಸಕಲಶ್ರೇಯಃಪ್ರದೋದ್ಯೋಗಿನಃ-ಸರ್ವಶ್ರೇಯಸ್ಸುಗಳನ್ನೂ ಕೊಡುವ ಪ್ರಯತ್ನವುಳ್ಳಥಾ, ದೃಷ್ಟಾದೃಷ್ಟಮತೋಪದೇಶಕೃತಿನಃ-ಐಹಿಕಾಮುಷ್ಮಿಕಫಲೋಪಾಯಗಳನ್ನು ತಿಳಿಸುವುದರಲ್ಲಿ ಸಮರ್ಥನಾದ, ಬಾಹ್ಯಾಂತರವ್ಯಾಪಿನಃ-ಹೊರಗೂ ಒಳಗೂ ವ್ಯಾಪಿಸಿ ಇರುವಂಥ, ಸರ್ವಜ್ಞಸ್ಯ-ಸರ್ವವನ್ನೂ ತಿಳಿದಂಥಾ, ದಯಾಕರಸ್ಯ-ದಯಾನಿಧಿಯಾದ, ಭವತಃ-ನಿನಗೆ ಮಯಾ-ನನ್ನಿಂದ, ಕಿಂ ವೇದಿತವ್ಯಂ-ಆವುದು ತಿಳಿಯಿಸತಕ್ಕದು? ತ್ವಂ-ನೀನು, ಪರಮಾಂತರಂಗಃ-ಮುಖ್ಯಾಂತರಂಗನು, ಇತಿ-ಎಂಬುದಾಗಿ, ಮೇ-ನನ್ನ, ಚಿತ್ತೇ-ಮನಸ್ಸಿನಲ್ಲಿ ಅನ್ವಹಂ-ಯಾವಾಗಲೂ, ಸ್ಮರಾಮಿ-ಸ್ಮರಿಸುತಲಿದೇನೆ. ಎಂದರೆ ಸರ್ವಜ್ಞನಾದ ನಿನ್ನ ವಿಷಯದಲ್ಲಿ ನಾನು ನೆನೆಸತಕ್ಕದೇನೂ ಇಲ್ಲ, ಆದರೆ ನನಿಗೆ ಅಂತರಂಗನೆಂದು ಮಾತ್ರ ನೆನೆಸುತ್ತೇನೆಂದು ಭಾವವು.

**ಭಕ್ತೋ ಭಕ್ತಿಗುಣಾವೃತೇ ಮುದಮೃತಾಪೂರ್ಣೇ ಪ್ರಸನ್ನೇ ಮನಃ |**
**ಕುಂಭೇ ಸಾಂಬ ತವಾಂಘ್ರಿಪಲ್ಲವ ಯುಗಂ ಸಂಸ್ಥಾಪ್ಯ ಸಂವಿತ್ಫಲಂ ||**
**ಸತ್ವಂ ಮಂತ್ರಮುದೀರಯನ್ ನಿಜಶರೀರಾಗಾರಶುದ್ಧಿಂ ವಹನ್|**
**ಪುಣ್ಯಾಹಂ ಪ್ರಕಟೀಕರೋಮಿ ರುಚಿರಂ ಕಲ್ಯಾಣಮಾಪಾದಯನ್ ||೩೬||**

ಅವತಾರಿಕೆ—ಈ ಶ್ಲೋಕದಿಂದ ಯಾವಾಗಲೂ ತಾನು ಪರಮೇಶ್ವರನ ಪಾದಾರವಿಂದಧ್ಯಾನ ಮಾಡುವಿಕೆಯನ್ನು ಪುಣ್ಯಾಹಕರ್ಮರೂಪವನ್ನಾಗಿ ಹೇಳುತ್ತಾರೆ.

ಟೀ|| ಹೇ ಸಾಂಬ! -ಎಲೈ ಉಮಾಸಹಿತನೇ! ಭಕ್ತಃ,ಭಕ್ತನಾದ ಅಹಂ-ನಾನು.ಭಕ್ತಿಗುಣಾವೃತೇ,ಭಕ್ತಿ-ಭಕ್ತಿಯೆಂಬ,ಗುಣ-ತಂತುವಿನಿಂದ, ಆವೃತೇ-ಸುತ್ತಲ್ಪಟ್ಟಂಥ (ಭಕ್ತಿಯೆಂಬ ಸುಗುಣದಿಂದ ತುಂಬಿರುವಂಥ) ಮುದಮೃತಾಪೂರ್ಣೇ, ಮುತ್-ಸಂತೋಷವೆಂಬ, ಅಮೃತ-ನೀರಿನಿಂದ ಆಪೂರ್ಣೆ-ಚೆನ್ನಾಗಿ ತುಂಬಿರುವಂಥ, ಪ್ರಸನ್ನೇ-ನಿರ್ಮಲವಾದ, ಮನಃಕುಂಭೇ-ಮನಸ್ಸೆಂಬ ಕುಂಭದಲ್ಲಿ, ತವ-ನಿನ್ನ, ಅಂಘ್ರಿಪಲ್ಲವಯುಗಂ, ಅಂಘ್ರಿಪಲ್ಲವ-ಪಾದಗಳೆಂಬ ಚಿಗುರುಗಳ, ಯುಗಂ-ಜೊತೆಯನ್ನು, ಸಂವಿತ್ಫಲಂ, ಸಂವಿತ್-ಜ್ಞಾನವೆಂಬ, ಫಲಂ-ತೆಂಗಿನಕಾಯಿಯನ್ನು ಸಹ, ಸಂಸ್ಥಾಪ್ಯ-ಇರಿಸಿ, ಸತ್ವಂ-ಸತ್ವಮಯವಾದ, ಮಂತ್ರಂ-ತಾರಕ ಮಂತ್ರವನ್ನು, ಉದೀರಯನ್-ಉಚ್ಚರಿಸುವಂಥವನಾಗಿ,ನಿಜಶರೀರಾಗಾರಶುದ್ಧಿಂ, ನಿಜ-ಸ್ವಕೀಯವಾದ, ಶರೀರ-ದೇಹವೆಂಬ, ಆಗಾರ-ಮನೆಯ, ಶುದ್ಧಿಂ-ಪರಿಶುದ್ಧತ್ವವನ್ನು, ವಹನ್-ಉಂಟು ಮಾಡುವಂತಹವನಾಗಿಯೂ, ರುಚಿರಂ-ಮನಸ್ಸಿಗೆ ಸಂತೋಷಕರವಾದ, ಕಲ್ಯಾಣಂ-ಶುಭವನ್ನು, ಆಪಾದಯನ್-ಉಂಟುಮಾಡುವವನಾಗಿಯೂ, ಪುಣ್ಯಾಹಂ.ಪುಣ್ಯಾಹಕರ್ಮವನ್ನು, ಪ್ರಕಟೀಕರೋಮಿ-ಪ್ರಕಾಶಗೊಳಿಸುತ್ತೇನೆ. ಎಂದರೆ ನಿನ್ನ ಭಕ್ತನಾದ ನನಗೆ ನಿನ್ನ ಪಾದಾಂಬುಜ ಸ್ಮರಣವೇ ಮುಖ್ಯ ಕರ್ಮವಾಗಿರುವುದರಿಂದ ಅದರ ದೆಸೆಯಿಂದಲೇ ನಾನು ಶರೀರಾತ್ಮಶುದ್ಧಿಯಂ ಪಡೆಯುತ್ತೇನೆಂದುಭಾವವು.

**ಆಮ್ನಾಯಾಂಬುಧಿಮಾದರೇಣ ಸುಮನಸ್ಸಂಘಾಸ್ಸಮುದ್ಯನ್ಮ**
**[ನೋ||**

**ಮಂಥಾನಂ ದೃಢಭಕ್ತಿರಜ್ಜುಸಹಿತಂ ಕೃತ್ವಾ ಮಥಿತ್ವಾತತಃ||**
**ಸೋಮಂ ಕಲ್ಪತರುಂ ಸುಪರ್ವಸುರಭಿಂ ಚಿಂತಾಮಣಿಂ ಧೀ**
**[ಮತಾಂ|**
**ನಿತ್ಯಾನಂದಸುಧಾನಿರಂತರರಮಾಸೌಭಾಗ್ಯಮಾತನ್ವತೇ||೩೭||**

ಅವತಾರಿಕೆ—ಸಕಲವೇದಗಳಿಗೂ ನಿನ್ನನ್ನೇ ಸಾರಭೂತನನ್ನಾಗಿ ಅಭಿಜ್ಞರು ತಿಳಿಯುತ್ತಾರೆಂದು ಹೇಳುತ್ತಾರೆ.

ಟೀ|| ಸುಮನಸ್ಸಂಘಾಃ-ದೇವತೆಗಳಂತೆ ವಿದ್ವಾಂಸರ ಸಮೂಹಗಳು, ಆದರೇಣ-ಶ್ರದ್ಧೆಯಿಂದ, ದೃಢಭಕ್ತಿರಜ್ಜುಸಹಿತಂ-ದೃಢವಾದ ಭಕ್ತಿಯೆಂಬ ಹಗ್ಗದಿಂದ ಸುತ್ತಲ್ಪಟ್ಟ ಥ, ಮನಃ-ಮನಸ್ಸನ್ನು, ಮಂಥಾನಂ-ಮಂದರಪರ್ವತದಂಥ ಕಡೆಗೋಲನ್ನಾಗಿ, ಕೃತ್ವಾ-ಮಾಡಿ, ಆಮ್ನಾಯಾಂಬುಧಿಂ-ವೇದವೆಂಬ ಸಮುದ್ರವನ್ನು- ಮಥಿತ್ವಾ-ಕಡೆದು, ತತಃ-ಅದರದೆಸೆಯಿಂದ, ಕಲ್ಪತರುಂ-ಕಲ್ಪವೃಕ್ಷರೂಪನಾಗಿಯೂ, ಸುಪರ್ವಸುರಭಿಂ - ಕಾಮಧೇನುಸದೃಶನಾಗಿಯೂ, ಚಿಂತಾಮಣಿಂ-ಚಿಂತಾಮಣಿಸಮಾನನಾಗಿಯೂ, ಧೀಮತಾಂ - ಬುದ್ಧಿಮಂತರಿಗೆ, ನಿತ್ಯಾನಂದಸುಧಾಂ-ನಿತ್ಯಾನಂದವೆಂಬ ಅಮೃತ ಸ್ವರೂಪನಾಗಿಯೂ, ನಿರಂತರರಮಾಸೌಭಾಗ್ಯಂ-ಮೋಕ್ಷಲಕ್ಷ್ಮೀನಿತ್ಯ ಸೌಭಾಗ್ಯವಂತನಾಗಿಯೂ, ಸೋಮಂ-ಉಮಾಸಹಿತನಾದ ನಿನ್ನನ್ನು, ಆತನ್ವತೇ - ಚೆನ್ನಾಗಿ ಕಂಡು ಕೊಳ್ಳುತ್ತಾರೆ; ಎಂದರೆ, ಹೇಗೆ ದೇವತೆಗಳು ಸಮುದ್ರವಂ ಮಥಿಸಿ ಅದರ ದೆಸೆಯಿಂದ ಚಂದ್ರನನ್ನು, ಕಲ್ಪವೃಕ್ಷವನ್ನು ಕಾಮಧೇನುವನ್ನು, ಚಿಂತಾಮಣಿಯನ್ನು, ಅಮೃತವನ್ನು, ಲಕ್ಷ್ಮಿಯನ್ನು, ಸಹ ಪಡೆದುಕೊಂಡರೋ ಹಾಗೆ ಜ್ಞಾನಿಗಳು ಸಕಲವೇದಗಳನ್ನೂ ಶೋಧಿಸಿ ಇಲ್ಲಿ ಹೇಳಲ್ಪಟ್ಟ ಸರ್ವಪದಾರ್ಥಸ್ವರೂಪನಾದ ನಿನ್ನಂ ಕಂಡುಕೊಂಡರೆಂದು ಭಾವವು.

**ಪ್ರಾಕ್ಪುಣ್ಯಾಚಲಮಾರ್ಗದರ್ಶಿತಸುಧಾಮೂರ್ತಿಃ ಪ್ರಸನ್ನಶ್ಶಿವ।**
**ಸ್ಸೋಮಸ್ಸದ್ಗಣಸೇವಿತೋಮೃಗಧರಃಪೂರ್ಣಸ್ತಮೋಮೋಚ**
**[ಕಃ ||**
**ಚೇತಃ ಪುಷ್ಕರಲಕ್ಷಿತೋ ಭವತಿಚೇದಾನಂದಪಾಥೋನಿಧಿಃ ।**
**ಪ್ರಾಗಲ್ಭ್ಯೇನ ವಿಜೃಂಭತೇ ಸುಮನಸಾಂ ವೃತ್ತಿಸ್ತದಾಜಾಯತೇ**

ಈ ತಾರಿಕೆ—ಪರಮಶಿವನೆಂಬ ಚಂದ್ರನ ದರ್ಶನದಿಂ ಸತ್ಪುರುಷರ ಆನಂದವೆಂಬ ಸಮುದ್ರವು ವೃದ್ಧಿಯನ್ನೈದುತ್ತದೆಂದು ಹೇಳುತ್ತಾರೆ.

ಟೀ || ಪ್ರಾಕ್ಪುಣ್ಯಾಚಲಮಾರ್ಗದರ್ಶಿತಸುಧಾಮೂರ್ತಿಃ-ಪೂರ್ವಜನ್ಮ ಸಂಚಿತವಾದ ಪುಣ್ಯವೆಂಬ ಪರ್ವತದ ಮಾರ್ಗದಿಂ ತೋರಿಸಲ್ಪಟ್ಟ ಅಮೃತಸ್ವರೂಪನಾದ ಆಕಾರವುಳ್ಳಂಥವನಾಗಿಯೂ, ಪ್ರಸನ್ನಃ-ನಿರ್ಮಲನಾಗಿಯೂ, ಸದ್ಗಣ ಸೇವಿತಃ-ಸತ್ಪುರುಷರ ಸಮೂಹದಿಂದ ಸೇವಿಸಲ್ಪಟ್ಟವನಾಗಿಯೂ, ಮೃಗಧರಃ-ಮೃಗವನ್ನು ಕೈಯಲ್ಲಿ ಹಿಡಿದವನಾಗಿಯೂ, ಪೂರ್ಣಃ-ಸರ್ವಜಗದ್ವ್ಯಾಪಿಯಾಗಿಯೂ, ತಮೋಮೋಚಕಃ-ತಮೋಗುಣವಂ ಬಿಡಿಸುವವನಾಗಿಯೂ, ಸೋಮಃ-ಪಾರ್ವತೀಸಮೇತನಾಗಿಯೂ ಇರುವ,ಶಿವಃ-ಪರಮೇಶ್ವರನು, ಚೇತಃಪುಷ್ಕರಲಕ್ಷಿತಃ ಹೃದಯವೆಂಬ ಆಕಾಶದಲ್ಲಿ ಕಾಣಲ್ಪಟ್ಟವನು, ಭವತಿಚೇತ್ - ಆದರೆ, ಆನಂದಪಾಥೋನಿಧಿಃ-ಆನಂದವೆಂಬ ಸಮುದ್ರವು, ಪ್ರಾಗಲ್ಭ್ಯೇನ-ಗಾಂಭೀರ್ಯದಿಂ, ವಿಜೃಂಭತೇ-ವೃದ್ಧಿಯಂ ಹೊಂದುತ್ತದೆ; ಮತ್ತು ತದಾ-ಆವಾಗ, ಸುಮನಸಾಂ-ವಿದ್ವಾಂಸರ,ವೃತ್ತಿಃ-ಮನಃಪ್ರವೃತ್ತಿಯೂ ಸಹ, ಜಾಯತೆ-ವುಂಟಾಗುತ್ತದೆ,

ಎಂದರೆ ಹೀಗೆಶಿವಸಾಕ್ಷಾತ್ಕಾರಕ್ಕೆ ಚಂದ್ರದರ್ಶನ ಸಾಮ್ಯವನ್ನು ಶ್ಲೇಷೆಯಿಂದಲೂ ರೂಪಕದಿಂದಲೂ ಹೇಳಿದರದೆಂತನೆ, ಮೂಡಲಕಡೆಯ ಪರಿಶುದ್ಧವಾದ ಉದಯಪರ್ವತದ ಮೇಲಿನ ದಾರಿಯಿಂದ ತೋರಿ, ಅ

ಮೃತಮಯ ಬಿಂಬವುಳ್ಳವನಾಗಿ, ನಿರ್ಮಲನಾಗಿ, ನಕ್ಷತ್ರಗಳ ಮಂಡ ಲದಿಂ ಸುತ್ತಲ್ಪಟ್ಟವನಾಗಿ, ತನ್ನ ಮಂಡಲದೊಳು ಮೃಗದ ಚಿಹ್ನೆಯಂ ವಹಿಸಿದವನಾಗಿ, ಷೋಡಶಕಲೆಗಳಿಂದ ಪೂರ್ಣನಾಗಿ, ಅಂಧಕಾರವನ್ನ ಗಲಿಸುವವನಾಗಿ, ಮಂಗಳಕರನಾಗಿ, ಇರುವ ಸೋಮನು ಆಕಾಶದಲ್ಲಿ ಪ್ರಕಾಶಗೊಂಡರೆ ಸಮುದ್ರವು ಹೆಚ್ಚಾಗಿ ವೃದ್ಧಿಯನ್ನು ಪಡೆಯುವಂತೆ ಆಗುತ್ತಿದೆ; ||೩೮||

**ಧರ್ಮೋ ಮೇ ಚತುರಂಘ್ರಿಕಸ್ಸುಚರಿತಃ ಪಾಪಂ ವಿನಾಶಂ ಗತಂ।**
**ಕಾಮಕ್ರೋಧಮದಾದಯೋ ವಿಗಳಿತಾಃ ಕಾಲಸ್ಸುಖಾವಿಷ್ಕೃತಃ ||**
**ಜ್ಞಾನಾನಂದಮಹೌಷಧಿಸ್ಸುಫಲಿತಾ ಕೈವಲ್ಯ ನಾಥೇ ಸದಾ ।**
**ಮಾನ್ಯೇಮಾನಸಪುಂಡರೀಕನಗರೇ ರಾಜಾವತಂಸೇ ಸ್ಥಿತೇ||೩೯**

ಅವತಾರಿಕೆ—ತಮ್ಮ ಹೃದಯದೊಳು ಪರಮೇಶ್ವರನು ನೆಲೆಗೊಳ್ಳುವಿಕೆಯನ್ನು ಧರ್ಮಿಷ್ಠನಾದ ದೊಡ್ಡ ಅರಸನ ದೃಷ್ಟಾಂತದಿಂದ ತಿಳಿಹಿಸುತ್ತಾರೆ.

ಟೀ|| ಕೈವಲ್ಯನಾಥೇ - ಮೋಕ್ಷಕ್ಕೆ ಅಧಿಪತಿಯಾಗಿಯೂ ಮಾನ್ಯೇ - ಸಕಲಲೋಕಪೂಜ್ಯನಾಗಿಯೂ ಇರುವ, ರಾಜಾವತಂಸೇ- ಚಂದ್ರಕಲಾಧಾರಿಯಾದ ಪರಮೇಶ್ವರನು, ಮೇ-ನನ್ನ, ಮಾನಸಪುಂಡರೀಕನಗರೇ-ಹೃದಯಕಮಲವೆಂಬ ಪಟ್ಟಣದಲ್ಲಿ. ಸದಾ - ಯಾವಾಗಲೂ, ಸ್ಥಿತೇ-ನೆಲೆಗೊಂಡಿರಲು, ಧರ್ಮಃ-ಧರ್ಮವು, ಚತುರಂಘ್ರಿಕಃ-ನಾಲ್ಕು ಪಾದಗಳಿಂದಲೂ ಒಪ್ಪಿ, ಸುಚರಿತಃ-ಚೆನ್ನಾಗಿ ಮಾಡಲ್ಪಟ್ಟಿತು; ತಾಪಂ- ಪಾಪವು, ವಿನಾಶಂ-ನಾಶವನ್ನು, ಗತಂ-ಹೊಂದಿತು; ಕಾಮಕ್ರೋಧ ಮದಾದಯಃ-ಕಾಮ, ಕ್ರೋಧ, ಮದ, ಮೊದಲಾದ ಶತ್ರುಗಳು, ವಿಗಳಿತಾಃ-ಜಾರಿಹೋದವು, ಕಾಲಃ - ದಿನವಾರಪಕ್ಷಮಾಸಾದಿ ಕಾಲವು,

ಸುಖಾಪಿಷ್ಕೃತಃ-ಸುಖಪ್ರಕಾಶಕವಾಗಿರುತ್ತದೆ, ಜ್ಞಾನಾನಂದ-ಜ್ಞಾನ ಮತ್ತು ಆನಂದವೆಂಬ, ಮಹೌಷಧಿಃ-ಸಸ್ಯವು, ಫಲಿತಾ-ಫಲಿಸಿತು; ಎಂದರೆ ಅದ್ವಿತೀಯನಾಗಿಯೂ ಸರ್ವಜನಪೂಜ್ಯನಾಗಿಯೂ ಇರುವ ರಾಜಶ್ರೇಷ್ಠನು ಪಟ್ಟಣಕ್ಕೆ ಅಧಿಪತಿಯಾಗಿರಲು ಆ ದೇಶದಲ್ಲಿ ಧರ್ಮವು ನಾಲ್ಕು ಪಾದಗಳಿಂದ ನೆಲೆಗೊಂಡು ಪಾಪವು ಕಳೆದು ಶತ್ರುಭಯವಿಲ್ಲದೆ ಸರ್ವಕಾಲವೂ ಸುಖಕರವಾಗಿ ಗಿಡ ಮೊದಲಾದವುಗಳು ಫಲಿಸಿ ಸುಭಿಕ್ಷವಾಗುವಂತೆ ಪರಮೇಶ್ವರನನ್ನು ತನ್ನ ಹೃದಯದಲ್ಲಿ ಧ್ಯಾನಿಸುವುದರಿಂದ ತನಗೆ ಸರ್ವಸುಖವೂ ಉಂಟಾದೀತೆಂದು ಭಾವವು.

**ಧೀಯಂತ್ರೇಣ ವಚೋಘಟೇನ ಕವಿತಾಕುಲ್ಯೋಪಕುಲ್ಯಾಕ್ರಮೈ-**
**ರಾನೀತೈಶ್ಚ ಸದಾಶಿವಸ್ಯ ಚರಿತಾಂಭೋರಾಶಿ ದಿವ್ಯಾಮೃತೈಃ ||**
**ಹೃತ್ಕೇದಾರಯುತಾಶ್ಚ ಭಕ್ತಿಕಲಮಾಸ್ಸಾಫಲ್ಯಮಾತನ್ವತೇ |**
**ದುರ್ಭಿಕ್ಷಾನ್ಮಮ ಸೇವಕಸ್ಯ ಭಗವನ್! ವಿಶ್ವೇಶ! ಭೀತಿಃ ಕುತಃ ||**

ಅವತಾರಿಕೆ—ಶಿವಭಕ್ತಿಯೆಂಬ ಫಲವನ್ನು ಪಡೆಯುವ ವಿಷಯದಲ್ಲಿ ತಕ್ಕ ಉಪಾಯಗಳಂ ಮಾಡುವ ತಮಗೆ (ಕವಿಗೆ) ದುಷ್ಕಾಲಕೃತವಾದ ಭಯವಿಲ್ಲವೆಂಬುದನ್ನು ಕೃಷಿಮಾಡುವವನ ದೃಷ್ಟಾಂತದಿಂ ಹೇಳುತ್ತಾರೆ.

ಟೀ|| ಹೇ ವಿಶ್ವೇಶ!-ಎಲೈ ಜಗದೀಶ್ವರನೆ!, ಹೇ ಭಗವನ್!-ಎಲೈ ಷಡ್ಗುಣಪೂರ್ಣನೇ!- ವಚೋಘಟೇನ-ವಾಕ್ಕೆಂಬ ಬಾನೆಯುಳ್ಳಂಥಾ, ಧೀಯಂತ್ರೇಣ-ಬುದ್ಧಿಯೆಂಬ ಯಂತ್ರದಿಂದ, ಕವಿತಾಕುಲ್ಯೋಪಕುಲ್ಯಾಕ್ರಮೈಃ-ಕವಿತ್ವವೆಂಬ ದೊಡ್ಡ ಚಿಕ್ಕ ಕಾಲುವೆಗಳ ಮಾರ್ಗಗಳಿಂದ ಆನೀತೈಃ-ತರಲ್ಪಟ್ಟಂಥಾ, ಸದಾಶಿವಸ್ಯ-ಪರಮಶಿವನ, ಚರಿತಾಂಭೋರಾಶಿದಿವ್ಯಾಮೃತೈಃ-ಮಹಿಮೆಯೆಂಬ ಜಲರಾಶಿಯ ದಿವ್ಯೋದಕಗಳಿಂದ, ಹೃತ್ಕೇ

ದಾರಯುತಾಃ-ಹೃದಯವೆಂಬ ಗದ್ದೆಯಲ್ಲಿ ನಾಟಲ್ಪಟ್ಟ, ಭಕ್ತಿಕಲಮಾಃ-ಭಕ್ತಿಯೆಂಬ ಪೈರುಗಳು, ಸಾಫಲ್ಯಂ - ಫಲಿಸುವಿಕೆಯನ್ನು, ಆತನ್ವತೇ-ವಿಸ್ತಾರವಾಗಿ ಹೊಂದುತ್ತವೆ; ಆದುದರಿಂದ ಸೇವಕಸ್ಯ-ನಿನ್ನ ದಾಸನಾದ ಮಮ-ನನಗೆ, ದುರ್ಭಿಕ್ಷಾತ್-ದುರ್ಭಿಕ್ಷದ ದೆಸೆಯಿಂದ, ಭೀತಿಃ-ಭಯವು, ಕುತಃ-ಯಾವ ಕಾರಣದಿಂದುಂಟಾದೀತು. ಎಂದರೆ ಯಾವಾಗಲೂ ಶಿವಭಕ್ತಿಪರನಾದ ನನಗೆ ಪ್ರಾಪಂಚಿಕವಿಷಯಗಳಿಂದಾಗುವ ಭಯವಿಲ್ಲವೆಂದು ಭಾವವು. ||೪೦||

**ಪಾಪೋತ್ಪಾತ ವಿಮೋಚನಾಯ ರುಚಿರೈಶ್ವರ್ಯಾಯ ಮೃತ್ಯುಂಜಯ ।**
**ಸ್ತೋತ್ರ ಧ್ಯಾನ ನತಿ ಪ್ರದಕ್ಷಿಣ ಸಪರ್ಯಾಲೋಕನಾ ಕರ್ಣನೇ**
**ಜಿಹ್ವಾ ಚಿತ್ತಶಿರೋಂಘ್ರಿ ಹಸ್ತನಯನಶ್ರೋತ್ರೈರಹಂ ಪ್ರಾರ್ಥಿತೋ ।**
**ಮಾಮಾಜ್ಞಾಪಯ ತನ್ನಿರೂಪಯ ಮುಹುರ್ಮಾಮೇವ ಮಾಮೇವಚಃ ||೪೧||**

ಅವತಾರಿಕೆ— ಕವಿಯು ತಾವು ಮಾಡುವ ಪರಮೇಶ್ವರನ ಭಜನವು ನಿರ್ವಿಘ್ನವಾಗಿ ನೆರವೇರಬೇಕೆಂದು ದೇವರ ಕೃಪೆಯನ್ನೇ ಬೇಡುತ್ತಾರೆ.

ಟೀ|| ಹೇ ಮೃತ್ಯುಂಜಯ!-ಎಲೈ ಮೃತ್ಯುವನ್ನು ಜಯಿಸಿದವನೇ!, ಪಾಪೋತ್ಪಾತವಿಮೋಚನಾಯ-ಪಾಪ-ಪಾಪಗಳೆಂಬ, ಉತ್ಪಾತ-ಉತ್ಪಾತಗಳ, ವಿಮೋಚನಾಯ - ಪರಿಹಾರಕ್ಕಾಗಿಯೂ, ರುಚಿರೈಶ್ವರ್ಯಾಯ, ರುಚಿರ-ಪ್ರಕಾಶವಾದ, ಐಶ್ವರ್ಯಾಯ-ಐಶ್ವರ್ಯಕ್ಕಾಗಿಯೂ, ಸ್ತೋತ್ರಧ್ಯಾನನತಿಪ್ರದಕ್ಷಿಣಸಪರ್ಯಾಲೋಕನಾಕರ್ಣನೇ, ಸ್ತೋತ್ರ-ಸ್ತೋತ್ರವು, ಧ್ಯಾನ-ಧ್ಯಾನವು, ನತಿಃ-ನಮಸ್ಕಾರವು, ಪ್ರದಕ್ಷಿ

ಣ-ಪ್ರದಕ್ಷಿಣವು, ಸಪರ್ಯಾ-ಪೂಜೆಯು, ಆಲೋಕನ-ಮೂರ್ತಿದರ್ಶನವು, ಆಕರ್ಣನೆ-ಚರಿತಶ್ರವಣವು, ಇವುಗಳಲ್ಲಿ. ಜಿಹ್ವಾಚಿತ್ತಶಿರೋಂಘ್ರಿಹಸ್ತ ನಯನಶ್ರೋತ್ರೈಃ, ಜಿಹ್ವಾ-ನಾಲಿಗೆ, ಚಿತ್ತ-ಮನಸ್ಸು, ಶಿರ-ತಲೆ, ಅಂ ಘ್ರಿ-ಕಾಲುಗಳು, ಹಸ್ತ-ಕೈಗಳು, ನಯನ-ಕಣ್ಣುಗಳು, ಶ್ರೋತ್ರ-ಕಿವಿಗ ಳು, ಇವುಗಳಿಂದ, ಅಹಂ-ನಾನು ಪ್ರಾರ್ಥಿತಃ - ಪ್ರಾರ್ಥಿಸಲ್ಪಟ್ಟಿದೇನೆ: ಆದುದರಿಂದ ಆ ವಿಷಯದಲ್ಲಿ, ಮಾಂ-ನನ್ನನ್ನು, ಆಜ್ಞಾಪಯ - ಕಟ್ಟಳೆ ಯಿಡು; ಮುಹುಃ-ಬಾರಿ ಬಾರಿಗೂ, ತತ್-ಆ ಆರಾಧನಪ್ರಕಾರವನ್ನು ನಿರೂಪಯ-ತೋರಿಸು; ಮೇ-ನನ್ನ, ಅವಚಃ ಮೂಕತ್ವವು, ಮಾಮೇವ-ನನ್ನನ್ನೇ, ಮಾ-ನಿರ್ಬಂಧಿಸಬಾರದು, ಎಂದರೆ ನಾನು ಮಾಡುವ ಸರ್ವ ವಿಧವಾದ ನಿನ್ನ ಕೈಂಕರ್ಯವು ನಿನ್ನ ಕೃಪೆಯಿಂದಲೇ ನೆರವೇರಬೇಕೆಂದು ಭಾವವು.

**ಗಾಂಭೀರ್ಯಂ ಪರಿಖಾಪದಂ ಘನಧೃತಿಃ ಪ್ರಾಕಾರ ಉದ್ಯದ್ಗು [ಣ।**
**ಸ್ತೋಮಶ್ಚಾಪ್ತಬಲಂ ಘನೇಂದ್ರಿಯಚಯೋ ದ್ವಾರಾಣಿ ದೇಹ [ಸ್ಥಿತಃ ॥**
**ವಿದ್ಯಾವಸ್ತುಸಮೃದ್ಧಿ ರಿತ್ಯಖಿಲಸಾಮಗ್ರೀಸಮೇತೇ ಸದಾ ।**
**ದುರ್ಗಾತಿಪ್ರಿಯ ದೇವ! ಮಾಮಕಮನೋದುರ್ಗೇ ನಿವಾಸಂ- [ಕುರು ॥೪೨॥**

ಅವತಾರಿಕೆ॥ ಅರಸುಗಳು ದುರ್ಗರೂಪವಾದ ಕೋಟೆಯಲ್ಲಿ ವಾಸವನ್ನಪೇಕ್ಷಿಸುವರಾದುದರಿಂದ ಅಂಥಾ ಕೋಟೆಯೋಪಾದಿ ಇ ರುವ ತನ್ನ ಹೃದಯದಲ್ಲಿ ಯಾವಾಗಲೂ ವಾಸಮಾಡಬೇಕೆಂದು ಪರ ಮೇಶ್ವರನಂ ಪ್ರಾರ್ಥಿಸುತ್ತಾರೆ.

ಟೀ॥ ಹೇ ದುರ್ಗಾತಿಪ್ರಿಯದೇವ! ಎಲೈ ದುರ್ಗಾದೇವಿಗೆ

ಅತ್ಯಂತಇಷ್ಟನಾದ ದೇವನೇ! ಗಾಂಭೀರ್ಯಂ-ಗಂಭೀರತ್ವವು, ಪರಿಘಾಪದಂ-ಕಂದಕವಾಗಿಯೂ, ಘನಧೃತಿಃ-ಭೇದಿಸುವುದಕ್ಕಶಕ್ಯವಾದ ಧೈರ್ಯವು, ಪ್ರಾಕಾರಃ-ಪ್ರಾಕಾರದ ಗೋಡೆಯಾಗಿಯೂ, ಉದ್ಯದ್ಗುಣಸ್ತೋಮಃ-ಅಭಿವೃದ್ಧವಾಗಿರುವ ಸತ್ವಾದಿಗುಣಗಳ ಸಮೂಹವು, ಆಪ್ತಬಲಂ-ನಂಬಿಕೆಯುಳ್ಳ ದಳವಾಗಿಯೂ, ದೇಹಸ್ಥಿತಃ-ದೇಹದಲ್ಲಿರುವ, ಘನೇಂದ್ರಿಯಚಯಃ - ಪ್ರಬಲಗಳಾದ ಇಂದ್ರಿಯಗಳ ಸಮೂಹವು, ದ್ವಾರಾಣಿ-ಬಾಗಿಲುಗಳು, ವಿದ್ಯಾ - ಜ್ಞಾನವು, ವಸ್ತುಸಮೃದ್ಧಿಃ - ಅರಸನಿಗೆ ಬೇಕಾದ ಸರ್ವಪದಾರ್ಥಗಳ ಸಮೃದ್ಧಿಯು, ಇತಿ-ಈ ಪ್ರಕಾರವಾಗಿ, ಅಖಿಲಸಾಮಗ್ರೀಸಮೇತೇ - ರಾಜನು ವಾಸಮಾಡುವುದಕ್ಕೆ ಬೇಕಾದ ಸಕಲಸಾಮಗ್ರಿಗಳಿಂದೊಡಗೂಡಿರುವ, ಸಾಮುಕಮನೋದುರ್ಗೇ-ನನ್ನ ಮನಸ್ಸೆಂಬಕೋಟೆಯಲ್ಲಿ, ನಿವಾಸಂ-ವಾಸವನ್ನು, ಕುರು-ಮಾಡು. ಎಂದರೆ ಜಗದೀಶ್ವರನಾದ ನೀನು ಮಹಾರಾಜನಾದುದರಿಂದಲೂ, ಮತ್ತು ದುರ್ಗಾತಿಪ್ರಿಯನಾದುದರಿಂದಲೂ, ನಿನ್ನ ಗೌರವಕ್ಕೆ ಸರ್ವವಸ್ತು ಸಮೃದ್ಧಿಯುಳ್ಳ ನನ್ನ ಮನಸ್ಸೆಂಬ ಕೋಟೆಯಲ್ಲಿ ಯಾವಾಗಲೂ ವಾಸಮಾಡಬೇಕೆಂದು ಪ್ರಾರ್ಥನೆಯಂಗೆಯ್ದರೆಂದು ಭಾವವು.

**ಮಾಗಚ್ಛತ್ವಮಿತಸ್ತತೋ ಗಿರಿಶ ಭೋ! ಮಯ್ಯೇವ ವಾಸಂ ಕುರು।**
**ಸ್ವಾಮಿನ್ನಾದಿಕಿರಾತ! ಮಾಮಕಮನಃಕಾಂತಾರಸೀಮಾಂತರೇ॥**
**ವರ್ತಂತೇ ಬಹುಶೋ ಮೃಗಾ ಮದಜುಷೋ ಮಾತ್ಸರ್ಯಮೋಹಾದಯ।**
**ಸ್ತಾನ್ ಹತ್ವಾ ಮೃಗಯಾವಿನೋದರುಚಿತಾಲಾಭಂ ಚ ಸಂಪ್ರಾಪ್ಸ್ಯಸಿ ॥೪೩॥**

ಅವತಾರಿಕೆ॥ ಪೂರ್ವಶ್ಲೋಕದಲ್ಲಿ ತಮ್ಮ ಹೃದಯವನ್ನು ಮಹಾರಾಜನಿಗೆ ವಾಸಯೋಗ್ಯವಾದ ಕೋಟೆಯನ್ನಾಗಿ ವರ್ಣಿಸಿ ಈ

ಶ್ಲೋಕದೊಳು ಅದನ್ನೇ ದೊಡ್ಡ ಅರಣ್ಯದೋಪಾದಿ ವರ್ಣಿಸುತ್ತಾರೆ.

ಟೀ|| ಹೇ ಗಿರಿಶ!-ಎಲೈ ಕೈಲಾಸನಾಥನೇ!, ಹೇ ಆದಿಕಿರಾತ!-ಎಲೈ ಮೊದಲನೇ ಕಿರಾತರೂಪಿಯೇ!, ಹೇ ಸ್ವಾಮಿನ್!-ಎಲೈ ನನ್ನ ಪ್ರಭುವೇ? ಮಾಮಕಮನಃಕಾಂತಾರಸೀಮಾಂತರೇ, ಮಾಮಕ-ನನ್ನ, ಮನಃ-ಮನಸ್ಸೆಂಬ, ಕಾಂತಾರ-ಅಡವಿಯ, ಸೀಮಾಂತರೇ-ಎಲ್ಲೆಯೊಳಗೆ, ಬಹುಶಃ-ಬಹುಳವಾಗಿ, ಮದಜುಷಃ-ಕೊಬ್ಬಿ ಇರುವ, ಮಾತ್ಸರ್ಯಮೋಹಾದಯಃ-ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಅಸೂಯೆ, ಮೊದಲಾದ, ಮೃಗಾಃ-ಮೃಗಗಳು, ವರ್ತಂತೇ-ನೆಲೆಗೊಂಡಿವೆ; ತಾನ್-ಅವುಗಳನ್ನು, ಹತ್ವಾ-ಕೊಂದು, ಮೃಗಯಾವಿನೋದರುಚಿತಾಲಾಭಂ, ಮೃಗಯಾ-ಬೇಟೆಯಾಡುವ,ವಿನೋದ-ವಿನೋದಲ್ಲಿ, ರುಚಿತಾ-ಕುತೂಹಲದ, ಲಾಭಂ-ಲಾಭವನ್ನು, ಪ್ರಾಪ್ಸ್ಯಸಿ-ಹೊಂದೀಯೆ; ತತಃ-ಆದುದರಿಂದ. ಮಯ್ಯೇವ-ನನ್ನಲ್ಲೇ ವಾಸಂ-ನಿವಾಸವನ್ನು ಕುರು-ಮಾಡು; ತ್ವಂ-ನೀನು, ಇತಃ-ಇಂಥಾ ನನ್ನ ಮನಸ್ಸೆಂಬ ಮಹಾರಣ್ಯವನ್ನು ಬಿಟ್ಟು, ಮಾಗಚ್ಛ-ಹೋಗಬೇಡ.

ಎಂದರೆ ತನ್ನ ಮನಸ್ಸು ಮಹಾರಣ್ಯದಂತೆ ಸಜ್ಜನ ಪ್ರಚಾರಕ್ಕೆ ಅಶಕ್ಯವಾಗಿಯೂ ಅರಿಷಡ್ವರ್ಗಗಳೆಂಬ ದುಷ್ಟಮೃಗಗಳಿಗೆ ಸಂಚಾರಸ್ಥಾನವಾಗಿಯೂ ಇರುವುದರಿಂದ ಆದಿಕಿರಾತರೂಪನಾದ ನೀನು ಇದರಲ್ಲಿ ವಾಸಮಾಡುತ್ತಾ ಆ ಮೃಗಗಳನ್ನು ಸಂಹರಿಸಿ ಇದನ್ನು ಪರಿಶುದ್ಧವನ್ನಾಗಿ ಮಾಡಬೇಕೆಂದು ಭಾವವು.

**ಕರಲಗ್ನಮೃಗಃ ಕರೀಂದ್ರಭಂಗೋ ।**
**ಘನಶಾರ್ದೂಲವಿಖಂಡನೋಽಸ್ತಜಂತುಃ ॥**
**ಗಿರಿಶೋ ವಿಶದಾಕೃತಿಶ್ಚ ಚೇತಃ ।**
**ಕುಹರೇ ಪಂಚಮುಖೋಽಸ್ತಿ ಮೇ ಕುತೋ ಭೀಃ ॥೪೯॥**

ಅವತಾರಿಕೆ—ತಮ್ಮ ಹೃದಯವೆಂಬ ಗುಹೆಯಲ್ಲಿ ಪರಮೇಶ್ವರನೆಂಬ ಸಿಂಹವು ವಾಸವಾಗುವುದರಿಂದ ತಮಗೆ ಯಾವವಿಧದಿಂದಲೂ ಭಯವಿಲ್ಲವೆಂದು ಹೇಳುತ್ತಾರೆ.

ಟೀ|| ಕರಲಗ್ನಮೃಗಃ-ಕೈಯನ್ನು ಅಂಟಿರುವ ಮೃಗವುಳ್ಳವನಾಗಿಯೂ, ಕರೀಂದ್ರಭಂಗಃ-ಗಜರೂಪನಾದ ಅಸುರನನ್ನು ಕೊಲ್ಲುವಂಥಾವನಾಗಿಯೂ, ಘನಶಾರ್ದೂಲವಿಖಂಡನಃ-ದೊಡ್ಡದಾದ ಹುಲಿಯನ್ನು ಸಂಹರಿಸುವನಾಗಿಯೂ, ಅಸ್ತಜಂತುಃ, ಅಸ್ತ-ಲಯವಂಹೊಂದಿಸಲ್ಪಟ್ಟ, ಜಂತುಃ-ಸಕಲಜಂತುಗಳುಳ್ಳವನಾಗಿಯೂ, ಗಿರಿಶಃ-ಪರ್ವತದಲ್ಲಿ ವಾಸಮಾಡುವನಾಗಿಯೂ, ವಿಶದಾಕೃತಿಃ-ನಿರ್ಮಲವಾದ ಆಕಾರವುಳ್ಳವನಾಗಿಯೂ ಇರುವ, ಪಂಚಮುಖಃ-ಪರಮೇಶ್ವರನೆಂಬ ಸಿಂಹವು , ಚೇತಃಕುಹರೇ-ಹೃದಯವೆಂಬ ಗುಹೆಯಲ್ಲಿ, ಅಸ್ತಿ-ಇದಾನೆಯಾಗಿ, ಭೀಃ-ಭಯವೆಂಬುದು, ಕುತಃ-ಎತರಿಂದುಂಟಾದೀತು' ಎಂದರೆ ಈ ಶ್ಲೋಕದಲ್ಲಿ ಶ್ಲೇಷೆಯಿಂದ ಕೈಯಿಂದ ಹೊಡೆಯಲ್ಪಟ್ಟ ಮೃಗವುಳ್ಳದಾಗಿಯೂ, ಆನೆಯಂ ಕೊಲ್ಲುವುದಾಗಿಯೂ, ಹುಲಿಗಳನ್ನು ಹೊಡೆಯುವುದಾಗಿಯೂ, ಬೆಟ್ಟದಲ್ಲಿ ಇರುವುದಾಗಿಯೂ ಇರುವ, ವಿಶಾಲಮುಖವುಳ್ಳ ಸಿಂಹದಂತ ಈಶ್ವರನು ತನ್ನ ಮನಸ್ಸೆಂಬ ಗುಹೆಯಲ್ಲ ವಾಸಮಾಡುತ್ತಾನೆಯಾಗಿ ತನಗೆ ಶತ್ರುಭಯವಿಲ್ಲವೆಂದು ಭಾವವು.

**ಛಂದಶ್ಶಾಖಿ ಶಿಖಾನ್ವಿತೈರ್ದ್ವಿಜವರೈಸ್ಸಂಸೇವಿತೇ ಶಾಶ್ವತೇ।**
**ಸೌಖ್ಯಾಪಾದಿನಿ ಖೇದಭೇದಿನಿ ಸುಧಾಸಾರೈಃ ಫಲೈರ್ದೀಪಿತೇ ||**
**ಚೇತಃಪಕ್ಷಿಶಿಖಾಮಣೇ ತ್ಯಜ ವೃಥಾ ಸಂಚಾರಮನ್ಯೈರಲಂ।**
**ನಿತ್ಯಂ ಶಂಕರ ಪಾದಪದ್ಮಯುಗಳೀನೀಡೇ ವಿಹಾರಂ ಕುರು|| ೪೫**

ಅವತಾರಿಕೆ|| ಈ ಶ್ಲೋಕದಿಂದ ತಮ್ಮ ಹೃದಯವನ್ನು ಪಕ್ಷಿಯನ್ನಾಗಿ ಭಾವಿಸಿ ಅದಕ್ಕೆ ಸುಖಕರವಾದ ಸ್ಥಿತಿಯನ್ನು ತಿಳಿಸುತ್ತಾರೆ.

ಟೀ|| ಹೇ ಚೇತಃಪಕ್ಷಿಶಿಖಾಮಣೇ!-ಎಲೈ ಮನಸ್ಸೆಂಬ ಶ್ರೇಷ್ಟವಾದ ಪಕ್ಷಿಯೇ! ಛಂದಶ್ಶಾಖಿಶಿಖಾನ್ವಿತೈಃ-ವೇದಗಳೆಂಬ ವೃಕ್ಷಗಳಿಗೆ ಅಗ್ರಭಾಗಗಳಾದ ಉಪನಿಷತ್ತುಗಳಿಂದ ಕೂಡಿರುವ, ಎಂದರೆ ಉಪನಿದರ್ಥಗಳನ್ನು ತಿಳಿದಿರುವ, ದ್ವಿಜವರೈಃ-(ಬ್ರಾಹ್ಮಣಶ್ರೇಷ್ಠರಿಂದ) ಪಕ್ಷಿಗಳಿಂದ, ಸಂಸೇವಿತೇ-ಆಶ್ರಯಿಸಲ್ಪಟ್ಟಿರುವಂಥಾ, ಖೇದಭೇದಿನಿ-ಶ್ರಮವನ್ನು ಹೋಗಲಾಡಿಸುವಂಥಾ, ಸುಧಾಸಾರೈಃಫಲೈರ್ದೀಪಿತೆ, ಸುಧಾಸಾರೈಃ ಅಮೃತರಸದೋಪಾದಿ ಮಧುರಗಳಾದ ಫಲೈಃ-ಫಲಗಳಿಂದ,ದೀಪಿತೆ-ಶೋಭಿಸುತ್ತಲಿರುವ. ಶಂಕರಪಾದಪದ್ಮಯುಗಳೀ-ಪರಮೇಶ್ವರನ ಚರಣಾಂಬುಜಗಳ ಜೊತೆಯೆಂಬ, ನೀಡೇ-ಗೂಡಿನಲ್ಲಿ, ವಿಹಾರಂ-ವಿಹರಿಸುವಿಕೆಯನ್ನು. ಕುರು-ಮಾಡು; ಅನ್ಯೈಃ-ಇತರ ಕ್ಷುದ್ರಗಳಾದ ಪಕ್ಷಿಗಳೊಂದಿಗೆ, (ವಿಷಯಗಳೊಂದಿಗೆ.) ಸಂಚಾರಂ-ಸಹವಾಸವನ್ನು, ಪ್ರಚಾರವನ್ನು, ತ್ಯಜ-ಬಿಡು, ಅಲಂ-ಅದಷ್ಟಕ್ಕೆ ಸಾಕು. ಎಂದರೆ

ಉಭಾಭ್ಯಾಮೇವ ಪಕ್ಷಾಭ್ಯಾಂ ಯಥಾ ಖೇ ಪಕ್ಷಿಣಾಂಗತಿಃ|
ತಥೈವ ಜ್ಞಾನಕರ್ಮಭ್ಯಾಂ ಪ್ರಾಪ್ಯತೇಶಾಶ್ವತೀ ಗತಿಃ ||

ಎಂಬುವ ನ್ಯಾಯದಿಂದ ತನ್ನ ಮನಸ್ಸೆಂಬ ಪಕ್ಷಿಯನ್ನು ಕುರಿತು ಯೋಗಿಜನಗಳಿಂದ ಆಶ್ರಯಿಸಲ್ಪಟ್ಟು ಮೋಕ್ಷಾನಂದಫಲಪ್ರದವಾದ ಪರಮಶಿವನ ಚರಣಾಂಬುಜವೆಂಬ ಗೂಡನ್ನು ಸೇರಿ ಪ್ರಾಪಂಚಿಕಸರ್ವವಿಷಯ ಸಂಪರ್ಕದುಃಖಗಳನ್ನು ಬಿಟ್ಟು ಸುಖಿಯಾಗಿರು ಎಂಬದಾಗಿ ಹೇಳಿದರು.

**ಆಕೀರ್ಣೇ ನಖರಾಜಿ ಕಾಂತಿವಿಭವೈ ರುದ್ಯತ್ಸುಧಾವೈಭವೈ |**
**ರಾಧೌತೇಪಿ ಚ ಪದ್ಮರಾಗ ಲಲಿತೇ ಹಂಸವ್ರಜೈ ರಾಶ್ರಿತೇ ||**
**ನಿತ್ಯಂ ಭಕ್ತಿವಧೂಗಣೈಶ್ಚ ರಹಸಿ ಸ್ವೇಚ್ಛಾವಿಹಾರಂ ಕುರು |**
**ಸ್ಥಿತ್ವಾಮಾನಸರಾಜಹಂಸ! ಗಿರಿಜಾನಾಥಾಂಘ್ರಿಸೌಧಾಂತರೇ ೪೭**

ಅವತಾರಿಕೆ—ಕವಿಯು ತಮ್ಮ ಮನಸ್ಸೆಂಬ ರಾಜಶ್ರೇಷ್ಠನನ್ನು

ಕುರಿತು ಪರಮೇಶ್ವರನ ಪಾದಾಬ್ಜವೆಂಬ ರಾಜಗೃಹದಲ್ಲಿ ವಾಸವಾಡ ಬೇಕೆಂದು ಪ್ರಾರ್ಥಿಸುತ್ತಾರೆ.

ಟೀ|| ಹೇ ಮಾನಸರಾಜಹಂಸ!-ಎಲೈ ಮನಸ್ಸೆಂಬ ರಾಜಹಂಸ ನೇ!, ರಾಜಶ್ರೇಷ್ಠನೇ!, ನಖರಾಜಿಕಾಂತಿವಿಭವೈಃ-ಉಗುರುಗಳ ಕಾಂತಿಗಳ ಅತಿಶಯಗಳಿಂದ, ಆಕೀರ್ಣೇ-ವ್ಯಾಪಿಸಿ ಇರುವಂಥಾ, ಉದ್ಯತ್ಸುಧಾವೈಭವೈಃ, ಉದ್ಯತ್-ಉದಯಿಸುತ್ತಲ್ಲಿರುವ, ಸುಧಾ-ಅಮೃತದ, (ಗಾರೆಯ,) ವೈಭವೈಃ-ಕಾಂತಿಗಳಿಂದ, ಆಧೌತೇಪಿಚ-ಬಹಳ ನಿರ್ಮಲವಾಗಿಯೂ ಇರುವಂಥಾ, ಪದ್ಮರಾಗಲಲಿತೇ, ಪದ್ಮರಾಗ-ಪದ್ಮರಾಗರತ್ನಗಳಿಂದಲೂ, (ಕಮಲಗಳ ಕಾಂತಿಗಳಿಂದಲೂ), ಲಲಿತೇ-ಸುಂದರವಾದಂಥಾ, ಹಂಸವ್ರಜೈಃ-ಪರಮಹಂಸರಾದ ಯತಿಗಳಿಂದಲೂ, (ಹಂಸಪಕ್ಷಿಗಳ ಸಮೂಹದಿಂದಲೂ,) ಆಶ್ರಿತೇ-ಆಶ್ರಯಿಸಲ್ಪಟ್ಟಿರುವ, ಗಿರಿಜಾನಾಥಾಂಘ್ರಿಸೌಧಾಂತರೇ-ಪಾರ್ವತೀಪತಿಯ ಪಾದಗಳೆಂಬ ರಾಜಗೃಹದ ಮಧ್ಯದಲ್ಲಿ, ಭಕ್ತಿವಧೂಗಣೈಸ್ಸಹ-ಭಕ್ತಿಯೆಂಬ ಸ್ತ್ರೀಗಣಗಳೊಂದಿಗೆ, ನಿತ್ಯಂ-ಯಾವಾಗಲೂ, ಸ್ಥಿತ್ವಾ-ವಾಸಮಾಡುತ್ತಾ, ಸ್ವೇಚ್ಛಾವಿಹಾರಂ-ಯಥೇಚ್ಛೆಯಾದ ವಿಹಾರವನ್ನು, ಕುರು-ಮಾಡು. ಎಂದರೆ ಪರಮೇಶ್ವರನ ಪಾದಾಂಬುಜವೆಂಬ ರಾಜಗೃಹದಲ್ಲಿ ಭಕ್ತಿಯೆಂಬ ರಮಣಿಗಳೊಂದಿಗೆ ವಿಹಾರಮಾಡೆಂದು ಭಾವವು.

**ಶಂಭುಧ್ಯಾನವಸಂತಸಂಗಿನಿ ಹೃದಾರಾಮೇಘಜೀರ್ಣಚ್ಛದಾಃ।**
**ಸ್ರಸ್ತಾಭಕ್ತಿಲತಾಚ್ಛಟಾವಿಲಸಿತಾಃ ಪುಣ್ಯಪ್ರವಾಳಾಶ್ರಿತಾಃ ||**
**ದೀಪ್ಯಂತೇ ಗುಣಕೋರಕಾ ಜಪವಚಃಪುಷ್ಪಾಣಿ ಸದ್ವಾಸನಾ।**
**ಜ್ಞಾನಾನಂದಸುಧಾಮರಂದಲಹರೀ ಸಂವಿತ್ಫಲಾಭ್ಯುನ್ನತಿಃ|| ೪೭**

ಅವತಾರಿಕೆ—ಶಿವಧ್ಯಾನದಿಂದ ತಮ್ಮ ಹೃದಯಕ್ಕೆ ಸರ್ವಗುಣ ಸಮೃದ್ಧಿಯುಂಟಾಗುತ್ತದೆಂದು ಹೇಳುತ್ತಾರೆ.

ಟೀ|| ಶಂಭುಧ್ಯಾನವಸಂತಸಂಗಿನಿ-ಪರಮೇಶ್ವರನ ಧ್ಯಾನವೆಂಬ ವಸಂತದೊಂದಿಗೆ ಸೇರಿರುವ, ಹೃದಾರಾಮೇ-ಹೃದಯವೆಂಬ ಉದ್ಯಾನದಲ್ಲಿ, ಅಘಜೀರ್ಣಚ್ಛದಾಃ-ಪಾಪಗಳೆಂಬ ಹಣ್ಣೆಲೆಗಳು, ಸ್ರಸ್ತಾಃ-ಜಾರಿಹೋದುವು, ಪುಣ್ಯಪ್ರವಾಲಾಶ್ರಿತಾಃ-ಪುಣ್ಯಗಳೆಂಬ ಚಿಗುರುಗಳನ್ನು ಹೊಂದಿರುವಂಥಾ, ಗುಣಕೋರಕಾಃ-ಸದ್ಗುಣಗಳೆಂಬ ಮೊಗ್ಗುಗಳನ್ನುಳ್ಳಂಥಾ, ಜಪವಚಃಪುಷ್ಪಾಃ-ಜಪದ ಮಂತ್ರಗಳ ನುಡಿಗಳೆಂಬ ಹೂವುಗಳನ್ನುಳ್ಳಂಥಾ, ಸದ್ವಾಸನಾಃ-ಸತ್ಕರ್ಮಗಳ (ಒಳ್ಳೆಯ) ವಾಸನೆಗಳನ್ನುಳ್ಳಂಥಾ, ವಿಲಸಿತಾಃ-ಪ್ರಕಾಶಿಸುತ್ತಲಿರುವ, ಭಕ್ತಿಲತಾಚ್ಛಟಾಃ-ಭಕ್ತಿಯೆಂಬ ಬಳ್ಳಿಗಳ ಸಮೂಹಗಳು, ಜ್ಞಾನಾನಂದ ಸುಧಾಮರಂದಲಹರೀ ಸಂವಿತ್ಫಲಾಭ್ಯುನ್ನತಿಃ, ಜ್ಞಾನ-ಬ್ರಹ್ಮಜ್ಞಾನವು, ಆನಂದ-ಆನಂದವು, ಈಯೆರಡೆಂಬ, ಸುಧಾಮರಂದ-ಅಮೃತ ಮಕರಂದಗಳ, ಲಹರೀ-ಪ್ರವಾಹವು, ಸಂವಿತ್ಫಲಾಭ್ಯುನ್ನತಿಃ-ಬ್ರಹ್ಮಜ್ಞಾನವೆಂಬ ಫಲದ ಅಭಿವೃದ್ಧಿಯು, ಇವುಗಳೆಲ್ಲವೂ, ದೀಪ್ಯಂತೇ-ಪ್ರಕಾಶಿಸುತ್ತವೆ. ಎಂದರೆ ಶಿವಧ್ಯಾನವೆಂಬ ವಸಂತ ಋತುವಿನಿಂದ ತನ್ನ ಹೃದಯೋದ್ಯಾನವು ಅತಿರಮಣೀಯವಾಗಿರ್ಪುದೆಂದು ಭಾವವು.

**ನಿತ್ಯಾನಂದರಸಾಲಯಂಸುರಮುನಿಸ್ವಾಂತಾಂಬುಜಾತಾಶ್ರಯಂ**
**ಸ್ವಚ್ಛಂ ಸದ್ದ್ವಿಜಸೇವಿತಂಕಲುಷಹೃತ್ಸದ್ವಾಸನಾವಿಷ್ಕೃತಮ್||**
**ಶಂಭುಧ್ಯಾನಸರೋವರಂ ವ್ರಜಮನೋಹಂಸಾವತಂಸಸ್ಥಿರಂ |**
**ಕಿಂಕ್ಷುದ್ರಾಶ್ರಯಪಲ್ವಲಭ್ರಮಣಸಂಜಾತಶ್ರಮಂಪ್ರಾಪ್ಸ್ಯಸಿ||**

ಅವತಾರಿಕೆ|| ಈ ಶ್ಲೋಕದಿಂದ ಪರಮಶಿವನ ಧ್ಯಾನವೆಂಬ ಸರೋವರದಲ್ಲಿ ಅವಗಾಹನವಂ ಮಾಡಿದರೆ ಸಕಲ ತಾಪೋಪಶಾಂತಿಯುಂಟಾಗುತ್ತದೆನ್ನುತ್ತಾರೆ.

ಟೀ|| ಹೇ ಮನೋಹಂಸಾವತಂಸ !-ಎಲೈ ಮನಸ್ಸೆಂಬ ರಾಜಹಂಸಶ್ರೇಷ್ಠವೇ ! ನಿತ್ಯಾನಂದರಸಾಲಯಂ-ಸ್ಥಿರವಾದ ಆನಂದ ರಸಕ್ಕೆ ಸ್ಥಾನವಾಗಿಯೂ, ಸುರಮುನಿಸ್ವಾಂತಾಂಬುಜಾತಾಶ್ರಯಂ,ಸುರ-ದೇವತೆಗಳು, ಮುನಿ-ಮುನಿಗಳು, ಇವರುಗಳ ಸ್ವಾಂತ-ಮನಸ್ಸುಗಳೆಂಬ ಅಂಬುಜಾತ-ಕಮಲಗಳಿಗೆ, ಆಶ್ರಯಂ-ಸ್ಥಾನವಾಗಿರುವಂಥಾ, ಸ್ವಚ್ಛಂ-ಚೆನ್ನಾಗಿ ನಿರ್ಮಲವಾಗಿ ಇರುವಂಥಾ, ಸದ್ದ್ವಿಜಸೇವಿತಂ-ಸತ್ಪುರುಷರೆಂಬ ಪಕ್ಷಿಗಳಿಂದ ಸೇವಿಸಲ್ಪಟ್ಟಿರುವಂಥಾ, ಕಲುಷಹೃತ್-ಕಳಂಕವನ್ನು ಹರಿಸುವಂಥಾ, ಸದ್ವಾಸನಾವಿಷ್ಕೃತಂ-ಯೋಗ್ಯವಾದ ವಾಸನೆ ಹುಟ್ಟುವಂಥಾದ್ದಾಗಿಯೂ ಇರುವ, ಶಂಭುಧ್ಯಾನಸರೋವರಂ-ಪರಮಶಿವಧ್ಯಾನವೆಂಬ ವಿಸ್ತಾರವಾದ ಕೊಳವನ್ನು, ವ್ರಜ-ಹೊಂದು; ಕ್ಷುದ್ರಾಶ್ರಯಪಲ್ವಲ-ಕ್ಷುದ್ರಜನಗಳ ಆಶ್ರಯವೆಂಬ ಕುಂಟೆಯಲ್ಲಿ, ಭ್ರಮಣ-ತಿರುಗುವಿಕೆಯಿಂದ, ಸಂಜಾತ-ಹುಟ್ಟಿದ, ಶ್ರಮಂ-ಆಯಾಸವನ್ನು, ಕಿಂ-ಏತಕೆ, ಪ್ರಾಪ್ಸ್ಯಸಿ-ಹೊಂದುತಲಿದ್ದೀಯೆ ? ಎಂದರೆ ಐಹಿಕಗಳಾದ ತುಚ್ಛ ಫಲಗಳನ್ನು ಅಪೇಕ್ಷಿಸಿ ನೀಚಜನಾಶ್ರಯ ದುಃಖವಂ ಪಡೆಯಬೇಡ, ನಿತ್ಯಾನಂದ ಸುಖಪ್ರದವಾದ ಪರಮೇಶ್ವರನ ಪಾದಾರವಿಂದವನ್ನು ಭಜಿಸೆಂದು ಭಾವವು.

**ಆನಂದಾಮೃತಪೂರಿತಾ ಹರಪದಾಂಭೋಜಾಲವಾಲೋದ್ಯತಾ|**
**ಸ್ಥೈರ್ಯೋಪಘ್ನಮುಪೇತ್ಯಭಕ್ತಿಲತಿಕಾಶಾಖೋಪಶಾಖಾನ್ವಿತಾ**
**ಉಚ್ಚೈರ್ಮಾನಸಕಾಯಮಾನಪಟಲೀಮಾಕ್ರಮ್ಯನಿಷ್ಕಲ್ಮಷಾ|**
**ನಿತ್ಯಾಭೀಷ್ಟಫಲಪ್ರದಾಭವತುಮೇಸತ್ಕರ್ಮಸಂವರ್ಧಿತಾ ||**

ಅವತಾರಿಕೆ|| ಶಿವಭಕ್ತಿಯೆಂಬ ಕಲ್ಪಕದ ಬಳ್ಳಿಯು ತಮಗೆ ಸರ್ವಾಭೀಷ್ಟಫಲವನ್ನೀಯಲೆನ್ನುತ್ತಾರೆ.

ಟೀ|| ಆನಂದಾಮೃತಪೂರಿತಾ-ಶಿವಭಜನಾನಂದವೆಂಬ ಉದಕದಿಂದ ನೆನೆಸಲ್ಪಟ್ಟುದಾಗಿಯೂ, ಹರಪದಾಂಭೋಜಾಲವಾಲೋದ್ಗತಾ, ಹರ-ಪರಮೇಶ್ವರನ, ಪದಾಂಭೋಜ-ಪಾದಕಮಲಗಳೆಂಬ, ಆಲವಾಲೋದ್ಗತಾ-ಪಾತಿಯಿಂದ ಮೊಳೆತಿರುವಂಥಾದ್ದಾಗಿಯೂ, ಸ್ಥೈರ್ಯೋಪಘ್ನಂ-ಧೈರ್ಯವೆಂಬ ಆಶ್ರಯ ವೃಕ್ಷವನ್ನು, ಉಪೇತ್ಯ-ಹೊಂದಿ, ಶಾಖೋಪಶಾಖಾನ್ವಿತಾ-ರೆಂಬೆಗಳಿಂದಲೂ ಅವುಗಳ ಕಿರುರೆಂಬೆಗಳಿಂದಲೂ, ಅನ್ವಿತಾ-ಕೂಡಿರುವಂಥಾ, ಉಚ್ಚೈಃ-ಎತ್ತರವಾಗಿರುವ, ಮಾನಸಕಾಯಮಾನಪಟಲೀಂ, ಮಾನಸ-ಮನಸ್ಸೆಂಬ ಕಾಯಮಾನಪಟಲೀಂ-ಚಪ್ಪರದ ಮೇಲ್ಭಾಗವನ್ನು, ಆಕ್ರಮ್ಯ-ಹರಬಿಕೊಂಡು, ಸತ್ಕರ್ಮಸಂವರ್ಧಿತಾ-ಶುಭಕರ್ಮಗಳಿಂದ ವೃದ್ಧಿಹೊಂದಿಸಲ್ಪಟ್ಟುದಾಗಿಯೂ, ನಿಷ್ಕಲ್ಮಷಾ-ದೋಷರಹಿತವಾಗಿಯೂ ಇರುವ, ಭಕ್ತಿಲತಿಕಾ-ಶಿವಭಕ್ತಿಯೆಂಬ ಬಳ್ಳಿಯು, ಮೇ-ನನಗೆ, ನಿತ್ಯಾಭೀಷ್ಟಫಲಪ್ರದಾ-ನಿತ್ಯವಾದ ಇಷ್ಟಾರ್ಥ ಫಲಗಳಂ ಕೊಡುವುದಾಗಿ, ಭವತು-ಆಗಲಿ. ಎಂದರೆ ನನ್ನ ಹೃದಯವನ್ನು ಚೆನ್ನಾಗಿ ವ್ಯಾಪಿಸಿಕೊಂಡಿರುವ ಶಿವಭಕ್ತಿಯಿಂದ ನಿತ್ಯವಾದ ಮೋಕ್ಷಾನಂದ ಫಲಗಳೆಲ್ಲಾ ಉಂಟಾಗುತ್ತವೆಂದು ಭಾವವು.



# ಎರಡನೆಯ ಭಾಗ.

**ಸಂಧ್ಯಾರಂಭವಿಜೃಂಭಿತಂ ಶ್ರುತಿಶಿರಸ್ಸ್ಥಾನಾಂತರಾಧಿಷ್ಠಿತಂ |**
**ಸಪ್ರೇಮಭ್ರಮರಾಭಿರಾಮಮಸಕೃತ್ಸದ್ವಾಸನಾಶೋಭಿತಮ್ ||**
**ಭೋಗೀಂದ್ರಾಭರಣಂ ಸಮಸ್ತಸುಮನಃಪೂಜ್ಯಂ ಗುಣಾವಿಷ್ಕೃತಂ |**
**ಸೇವೇ ಶ್ರೀಗಿರಿಮಲ್ಲಿಕಾರ್ಜುನಮಹಾಲಿಂಗಂ ಶಿವಾಲಿಂಗಿತಮ್ ||೫೦||**

ಅವತಾರಿಕೆ|| ಶ್ರೀಶೈಲವಾಸಿಯಾದ ಮಲ್ಲಿಕಾರ್ಜುನ ದೇವರನ್ನು ಭಜಿಸುತ್ತೇವೆಂದು ಹೇಳುತ್ತಾರೆ.

ಸಂಧ್ಯಾರಂಭವಿಜೃಂಭಿತಂ-ಸಂಧ್ಯಾಕಾಲದ ನಾಟ್ಯದ ಆರಂಭದಲ್ಲಿ ವಿಜೃಂಭಿಸುವಂಥಾ, ಶ್ರುತಿಶಿರಸ್ಥಾನಾಂತರಾಧಿಷ್ಠಿತಂ, ಶ್ರುತಿಶಿರಃ-ಉಪನಿಷತ್ತುಗಳೆಂಬ ಸ್ಥಾನಾಂತರ-ಸ್ಥಾನಾಂತರದಲ್ಲಿ ಅಧಿಷ್ಠಿತಂ-ನೆಲೆಗೊಂಡಿರುವಂಥಾ, ಸಪ್ರೇಮಭ್ರಮರಾಭಿರಾಮಂ-ಪ್ರೇಮಸಹಿತೆಯಾದ ಭ್ರಮರಾಂಬಿಕೆಯಿಂದ ಶೋಭಿಸಿರುವಂಥಾ, ಸದ್ವಾಸನಾಶೋಭಿತಂ-ಸಜ್ಜನಗಳ ಭಾವನೆಯಿಂದ ಪ್ರಕಾಶಿಸುತ್ತಲಿರುವಂಥಾ, ಭೋಗೀಂದ್ರಾಭರಣಂ-ಸರ್ಪಶ್ರೇಷ್ಠಗಳನ್ನೇ ಆಭರಣವಾಗಿಯುಳ್ಳಂಥಾ, ಸಮಸ್ತಸುಮನಃಪೂಜ್ಯಂ-ಸರ್ವ ದೇವತೆಗಳಿಂದಲೂ ಪೂಜಿಸಲ್ಪಟ್ಟಂಥಾ ಗುಣಾವಿಷ್ಕೃತಂ-ಸತ್ವಗುಣಸಂಬಂಧದಿಂ ಪ್ರಕಾಶಿಸಲ್ಪಟ್ಟಂಥಾ, ಶಿವಾಲಿಂಗಿತಂ,ಶಿವಾ-ಪಾರ್ವತೀದೇವಿಯಿಂದ ಆಲಿಂಗಿತಂ-ಆಲಿಂಗನ ಮಾಡಲ್ಪಟ್ಟಂಥಾ, ಶ್ರೀಗಿರಿಮಲ್ಲಿಕಾರ್ಜುನಮಹಾಲಿಂಗಂ, ಶ್ರೀಗಿರಿ-ಶ್ರೀಶೈಲದ ಮಲ್ಲಿಕಾರ್ಜುನ ಮಹಾಲಿಂಗಂ-ಮಲ್ಲಿಕಾರ್ಜುನನೆಂಬ ಹೆಸರಿನಿಂದ ಬೆಳಗುತಿರುವ ಮಹಾಲಿಂಗವನ್ನು, ಸೇವೇ-ಭಜಿಸುತ್ತೇನೆ. ಎಂದರೆ ಶ್ರೀಶೈಲದ ಶಿಖರದಲ್ಲಿ ಬೆಳೆದಿರುವಂಥಾ ಮಲ್ಲಿಗೆ ಬಳ್ಳಿಯೊಡನೆ ಸೇರಿರುವಂಥಾ ಅರ್ಜುನವೃಕ್ಷದ ಅಡಿಯನ್ನು ಸೇರುವಂತೆಯೂ ಶ್ಲೇಷೆಯಿಂದ ಒಂದು ಭಾವಾರ್ಥವು ವ್ಯಕ್ತವಾಗುತ್ತದೆ. ಹೇಗೆಂದರೆ—ಸಂಧ್ಯಾಕಾಲದಲ್ಲಿ ವಿಕಸಿತವಾಗಿಯೂ ಪರ್ವತ ಶಿಖರಗಳಲ್ಲದೆ ಅನ್ಯಸ್ಥಾನಗಳ

ಲ್ಲಿಯೂ ಬೆಳೆದಿರುವುದಾಗಿಯೂ, ತುಂಬಿಗಳಿಂದ ಶೋಭಿತವಾಗಿಯೂ, ಸುಗಂಧವುಳ್ಳುದಾಗಿಯೂ ಭೋಗವುಳ್ಳ ದೊಡ್ಡವರಿಗೆ ಭೂಷಣವಾಗಿಯೂ ಇರುವಂಥಾ ಪೂಜಾರ್ಹಗಳಾದ ಸರ್ವ ಪುಷ್ಪಗಳುಳ್ಳಂಥಾ ಸುಗಂಧಾದಿ ಸರ್ವಗುಣಗಳುಳ್ಳಂಥಾ ಮಲ್ಲಿಗೆಯ ಬಳ್ಳಿಯೊಂದಿಗೆ ಸೇರಿರುವಂಥಾ ಮತ್ತು ಶ್ರೀಶೈಲಕ್ಕೆ ದೊಡ್ಡಗುರುತಾಗಿರುವಂಥಾ ಮತ್ತಿಯ ಮರವನ್ನು ಆಶ್ರಯಿಸುತ್ತೇನೆಯಾಗಿ ಇದರಿಂದ ನನ್ನ ತಾಪ ಪರಿಹಾರ ವುಂಟಾಗುತ್ತದೆಂದು ಭಾವವು.

ಭೃಂಗೀಚ್ಛಾನಟನೋತ್ಕಟಃ ಕರಿಮದಗ್ರಾಹೀಸ್ಫುರನ್ಮಾಧವಾ ।
ಹ್ಲಾದೊನಾದಯುತೋಮಹಾಸಿತವಪುಃಪಂಚೇಷುಣಾಚಾದೃತಃ ॥
ಸತ್ಪಕ್ಷಸ್ಸುಮನೋವನೇಷು ಸಪುನಸ್ಸಾಕ್ಷಾನ್ಮದೀಯೇಮನೋ ।
ರಾಜೀವೇಭ್ರಮರಾಧಿಪೋವಿಹರತಾಂ ಶ್ರೀಶೈಲವಾಸೀವಿಭುಃ ॥೫೧॥

ಅವತಾರಿಕೆ॥ ಶ್ರೀಶೈಲವಾಸಿಯಾದ ಪರಮೇಶ್ವರನೆಂಬ ಭ್ರಮರಾಧಿಪನು ಎಂದರೆ ತುಂಬಿಯು ತನ್ನ ಹೃದಯ ಕಮಲದಲ್ಲಿ ವಿಹಾರವಂ ಮಾಡಬೇಕೆಂದು ಪ್ರಾರ್ಥಿಸುತ್ತಾರೆ.

ಟೀ ॥ ಭೃಂಗೀಚ್ಛಾನಟನೋತ್ಕಟಃ-ಭೃಂಗಿಯೆಂಬ ಗಣದ ಇಚ್ಛೆಯಮೇರೆ ನಟನ ಮಾಡುವುದರಲ್ಲಿ ಅಧಿಕಾಪೇಕ್ಷೆಯುಳ್ಳಂಥಾವನಾಗಿ, ತುಂಬಿಯು ಪರದಲ್ಲಿ ಹೆಣ್ಣು ತುಂಬಿಯ ಇಚ್ಛೆಯ ಮೇರೆ ಕುಣಿಯುವಂಥಾದ್ದಾಗಿಯೂ, ಕರಿಮದಗ್ರಾಹೀ-ಗಜಾಸುರನ ಮದವನ್ನು ಹರಿಸುವಂಥವನಾಗಿಯೂ, ಆನೆಯ ಮದಜಲವನ್ನು ಗ್ರಹಿಸುವುದಾಗಿಯೂ, ಸ್ಫುರನ್ಮಾಧವಾಹ್ಲಾದಃ-ಪ್ರಕಾಶವಾದ ವಿಷ್ಣುವಿನ ಆಹ್ಲಾದವುಳ್ಳಂಥಾವನಾಗಿಯೂ, ಪ್ರಕಟವಾದ ವಸಂತಋತುವಿನಲ್ಲಿ ಆನಂದವುಳ್ಳುದಾಗಿಯೂ, ನಾದಯುತಃ-ಪ್ರಣವನಾದದೊಂದಿಗೆ ಸೇರಿದವನಾಗಿಯೂ ಝುಂಕಾರನಾದವುಳ್ಳುದಾಗಿಯೂ, ಮಹಾಸಿತವಪುಃ-ಮಹಾ ಪ್ರಮಾಣ

ವುಳ್ಳ ಬಿಳಿಯದೇಹವುಳ್ಳವನಾಗಿಯೂ, ಕಪ್ಪಾದ ದೇಹವುಳ್ಳುದಾಗಿಯೂ ಪಂಚೇಷುಣಾಚಾದೃತಃ-ಮನ್ಮಥನಿಂದ ಗುರಿಮಾಡಲ್ಪಟ್ಟವನಾಗಿಯೂ, ಮನ್ಮಥನಿಂದ ತನಗೆ ಸಹಾಯವಾಗಿ ಆದರಿಸಲ್ಪಟ್ಟುದಾಗಿಯೂ, ಸುಮನೋವನೇಷು-ದೇವತೆಗಳ ರಕ್ಷಣದಲ್ಲಿಯೂ, ಪುಷ್ಪೋದ್ಯಾನಗಳಲ್ಲಿಯೂ, ಸತ್ಪಕ್ಷಃ-ಸ್ಥಿರವಾದ ಅಪೇಕ್ಷೆಯುಳ್ಳವನಾಗಿಯೂ, ಅಭಿಮಾನವುಳ್ಳುದಾಗಿಯೂ, ಸಃ-ಪ್ರಸಿದ್ಧವಾದ, ಶ್ರೀ ಶೈಲವಾಸೀ-ಶ್ರಿ ಶೈಲದಲ್ಲಿ ನೆಲೆಸಿರುವನಾಗಿಯೂ, ವಾಸವಂ ಮಾಡುವುದಾಗಿಯೂ, ವಿಭುಃ-ವ್ಯಾಪಕನಾಗಿಯೂ, ಹೂವುಗಳಲ್ಲಿ ತಿರುಗುವುದಾಗಿಯೂ, ಇರುವ ಭ್ರಮರಾಧಿಪಃ-ಭ್ರಮರಾಂಬಾವಲ್ಲಭನಾದ ಮಲ್ಲಿಕಾರ್ಜುನ ದೇವರೆಂಬ ಶ್ರೇಷ್ಠವಾದ ತುಂಬಿಯು, ಮದೀಯೇ-ನನ್ನದಾದ, ಮನೋರಾಜೀವೇ-ಮನಸ್ಸೆಂಬ ಕಮಲದಲ್ಲಿ, ಸಾಕ್ಷಾತ್-ಪ್ರತ್ಯಕ್ಷವಾಗಿ, ವಿಹರತಾಂ-ವಿಹಾರವಂ ಮಾಡಲಿ, ಎಂದರೆ ಕಮಲದಲ್ಲಿ ತುಂಬಿಯು ವಾಸಮಾಡುವಂತೆ ಪರಮೇಶ್ವರನು ನನ್ನ ಹೃದಯದಲ್ಲಿ ವಾಸವಾಗಿರಲೆಂದು ಭಾವವು.

> **ಕಾರುಣ್ಯಾಮೃತವರ್ಷಿಣಂ ಘನವಿಪದ್ಗ್ರೀಷ್ಮಚ್ಛಿದಾಕರ್ಮಠಂ |**
> **ವಿದ್ಯಾಸಸ್ಯಫಲೋದಯಾಯಸುಮನಸ್ಸಂಸೇವ್ಯಮಿಚ್ಛಾಕೃತಿಮ್ ||**
> **ನೃತ್ಯದ್ಭಕ್ತಮಯೂರಮದ್ರಿನಿಲಯಂ ಚಂಚಜ್ಜಟಾಮಂಡಲಂ |**
> **ಶಂಭೋ ! ವಾಂಛತಿ ನೀಲಕಂಧರ ! ಸದಾ ತ್ವಾಂಮೇಮನಶ್ಚಾತಕಃ ||೫೨||**

ಅವತಾರಿಕೆ|| ಈ ಶ್ಲೋಕದಲ್ಲಿ ಶ್ಲೇಷೆಯುಳ್ಳ ವಿಶೇಷಣಗಳಿಂದ ಪರಮೇಶ್ವರನಿಗೆ ಮೇಘತ್ವವನ್ನು ಹೇಳಿ, ಅಂಥಾ ಮೇಘವನ್ನು ತಮ್ಮ ಮನಸ್ಸೆಂಬ ಚಾತಕವಪೇಕ್ಷಿಸುವಿಕೆಯನ್ನು ಹೇಳುತ್ತಾರೆ.

ಟೀ|| ಹೇ ಶಂಭೋ !-ಎಲೈ ಶುಭಕರನೇ !, ಹೇ ನೀಲಕಂಧರ-ಎಲೈ ನೀಲಕಂಠನೇ, ಕಂಧರಶಬ್ದಕ್ಕೆ ಮೇಘವೆಂಬುದಾಗಿ ಅರ್ಥಾಂತರವಿರುವುದರಿಂದ ಎಲೈ ನೀಲಮೇಘವೇ, ಕಾರುಣ್ಯಾಮೃತವರ್ಷಿಣಾಂ-

ದಯೆಯೆಂಬ ಅಮೃತವನ್ನು (ಜಲವನ್ನು) ಸುರಿಸುವಂಥಾ, ಘನ-ಘನವಾದ, ವಿಪತ್-ಆಪತ್ತೆಂಬ, ಗ್ರೀಷ್ಮ-ತಾಪವನ್ನು, ಛಿದಾ-ಛೇದಿಸುವುದರಲ್ಲಿ, ಕರ್ಮಠಂ-ಸಮರ್ಥವಾದಂಥಾ, ವಿದ್ಯಾಸಸ್ಯಫಲೋದಯಾಯ, ವಿದ್ಯಾ-ಜ್ಞಾನವೆಂಬ, ಸಸ್ಯ-ಪೈರಿನ, ಫಲ-ಫಲದ, ಉದಯಾಯ-ಉತ್ಪತ್ತಿಗೋಸ್ಕರ, ಸುಮನಃ-ವಿದ್ವಾಂಸರಿಂದ, ಒಳ್ಳೆಯ ಆರಂಬಗಾರರಿಂದ, ಸಂಸೇವ್ಯಂ-ಆಶ್ರಯಿಸಲ್ಪಟ್ಟಂಥಾ, ಇಚ್ಛಾಕೃತಿಂ-ಸ್ವೇಚ್ಛೆಯಾದ ಆಕಾರವುಳ್ಳಂಥಾ, ನೃತ್ಯದ್ಭಕ್ತಮಯೂರಂ-ಕುಣಿದಾಡುವ ಭಕ್ತರೆಂಬ ನವಿಲುಗಳುಳ್ಳಂಥಾ, ಅದ್ರಿನಿಲಯಂ-ಕೈಲಾಸವಾಸಿಯಾದ, ಪರ್ವತವಾಸಿಯಾದಂಥಾ, ಚಂಚಜ್ಜಟಾಮಂಡಲಂ—ಪ್ರಕಾಶಮಾನವಾದ ಜಟೆಗಳ ಸಮೂಹವುಳ್ಳಂಥಾ, ಮಿಂಚುಗಳುಳ್ಳಂಥಾ, ತ್ವಾಮೇವ-ನಿನ್ನನ್ನೇ, ಸದಾ-ಯಾವಾಗಲೂ, ಮೇ-ನನ್ನ, ಮನಶ್ಚಾತಕಃ-ಮನಸ್ಸೆಂಬ ಚಾತಕಪಕ್ಷಿಯು, ವಾಂಛತಿ-ಅಪೇಕ್ಷಿಸುತ್ತಲಿದೆ. ಎಂದರೆ ಚಾತಕವು ಮೇಘವನ್ನು ಅಪೇಕ್ಷಿಸುವಂತೆ ನನ್ನ ಹೃದಯವು ನಿನ್ನನ್ನೇ ಅಪೇಕ್ಷಿಸುತ್ತಲಿದೆ ಎಂದು ಭಾವವು.

**ಆಕಾಶೇನ ಶಿಖೀ ಸಮಸ್ತಫಣಿನಾಂನೇತ್ರಾ ಕಲಾಪೀನತಾ |**
**ನುಗ್ರಾಹೀ ಪ್ರಣವೋಪದೇಶನಿನದೈಃ ಕೇಕೀತಿಯೋ ಗೀಯತೇ ||**
**ಶ್ಯಾಮಾಂ ಶೈಲಸಮುದ್ಭವಾಂ ಘನರುಚಿಂ ದೃಷ್ಟ್ವಾನಟಂತಂ ಮುದಾ |**
**ವೇದಾಂತೋಪವನೇ ವಿಹಾರ ರಸಿಕಂ ತಂ ನೀಲಕಂಠಂ ಭಜೇ ||೫೩||**

ಅವತಾರಿಕೆ|| ನೀಲಕಂಠನಾದ ಪರಮೇಶ್ವರನೆಂಬ ನವಿಲನ್ನು ಭಜಿಸುತ್ತೇನೆಂದು ಹೇಳುತ್ತಾರೆ.

ಟೀ|| ಯಃ-ಯಾರು, ಆಕಾಶೇನ-ಆಕಾಶದಿಂದ, ಶಿಖೀ-ಶಿಖೆಯುಳ್ಳವನಾಗಿಯೂ, (ವ್ಯೋಮಕೇಶನೆಂದು ಭಾವವು,) ಆಕಾಶದಂತೆ ತೋ

ರುವ ಶಿಖೆಯುಳ್ಳದ್ದಾಗಿಯೂ, ಸಮಸ್ತಫಣಿನಾಂ ನೇತ್ರಾ-ಸರ್ವಸರ್ಪ ಗಳಿಗೂ ಶ್ರೇಷ್ಠನಾದ ಆದಿಶೇಷನಿಂದ, ಕಲಾಪೀ-ಭೂಷಣವುಳ್ಳವನಾಗಿ ಯೂ, ಪಿಂಛವುಳ್ಳದ್ದಾಗಿಯೂ, ನತಾನುಗ್ರಾಹೀ-ಭಜಿಸುವಂಥಾವ ರನ್ನು ಅನುಗ್ರಹಿಸುವವನಾಗಿಯೂ, ಪ್ರಣವೋಪದೇಶನಿನದೈಃ-ಓಂಕಾ ರದ ಉಪದೇಶ ಶಬ್ದಗಳಿಂದ, ಕೇಕೀತಿ-ಕೇಕಿಯೆಂಬದಾಗಿ, ಗೀಯತೇ- ಹೇಳಲ್ಪಡುತ್ತದೋ, ತಂ-ಅಂಥಾ ಪ್ರಸಿದ್ಧನಾದ, ಶ್ಯಾಮಾಂ-ಯೌವ ನವತಿಯಾಗಿಯೂ, ಶ್ಯಾಮಲವರ್ಣವಾಗಿಯೂ ಇರುವ, ಶೈಲಸಮು ದ್ಭವಾಂ-ಪರ್ವತಗಳಿಂದ ಎದ್ದಿರುವ, ಘನರುಚಿಂ-ಮೇಘಕಾಂತಿಯನ್ನು ಮನೋಜ್ಞಕಾಂತಿಯುಳ್ಳ ಹಿಮಗಿರಿ ಕುಮಾರಿಯನ್ನು, ದೃಷ್ಟ್ವಾ- ನೋಡಿ, ಮುದಾ-ಸಂತೋಷದಿಂದ, ನಟಂತಂ-ಕುಣಿಯುವಂಥಾ, ವೇದಾಂತೋಪವನೇ-ಉಪನಿಷತ್ತುಗಳೆಂಬ ಉದ್ಯಾನದಲ್ಲಿ, ವಿಹಾರ ರಸಿಕಂ-ವಿಹರಿಸುವುದರಲ್ಲಿ ಕುತೂಹಲವುಳ್ಳ, ನೀಲಕಂಠಂ-ಪರಮೇಶ್ವ ರನನ್ನು, ನವಿಲನ್ನು, ಭಜೇ-ಹೊಂದುತಲಿದೇನೆ. ಎಂದರೆ ಮಯೂರ ರೂಪನಾದ ಪರಮೇಶ್ವರನನ್ನು ಭಜಿಸುತ್ತೇನೆಂದು ಭಾವವು.

**ಸಂಧ್ಯಾಘರ್ಮದಿನಾತ್ಯಯೋ ಹರಿಕರಾಘಾತಪ್ರಭೂತಾನಕ |**
**ಧ್ವಾನೋ ವಾರಿದಗರ್ಜಿತಂ ದಿವಿಷದಾಂದೃಷ್ಟಿಚ್ಛಟಾ ಚಂಚಲಾ ||**
**ಭಕ್ತಾನಾಂ ಪರಿತೋಷಬಾಷ್ಪವಿತತಿರ್ವೃಷ್ಟಿರ್ಮಯೂರೀ ಶಿವಾ |**
**ಯಸ್ಮಿನ್ನುಜ್ವಲತಾಂಡವಂ ವಿಜಯತೇ ತಂ ನೀಲಕಂಠಂ ಭಜೇ ||೫೪||**

ಅವತಾರಿಕೆ|| ಮತ್ತೊಂದು ಪ್ರಕಾರವಾಗಿ ದೇವರನ್ನು ಮಯೂ ರವನ್ನಾಗಿ ಭಾವಿಸುತ್ತಾರೆ.

ಟೀ|| ಯಸ್ಮಿನ್ ಯಾವ ಪರಮೇಶ್ವರನೆಂಬ ನವಿಲಿನ ನರ್ತನ ದಲ್ಲಿ, ಸಂಧ್ಯಾ-ಸಂಧ್ಯಾಕಾಲವು, ಘರ್ಮದಿನಾತ್ಯಯಃ-ಗ್ರೀಷ್ಮಕಾಲದ

ಅಂತ್ಯವ್ರೋ ಎಂದರೆ ವರ್ಷಾಕಾಲವ್ರೋ, ಹರಿಕರಾಘಾತಪ್ರಭೂತಾನಕ ಧ್ವಾನಃ, ಹರಿ-ವಿಷ್ಣುವಿನ, ಕರ-ಹಸ್ತಗಳಿಂದ, ಆಘಾತ-ಬಾರಿಸುವ್ರದ ರಿಂದ, ಪ್ರಭೂತ-ಬಲವಾಗಿ ಹುಟ್ಟಿದಂಥಾ, ಆನಕ-ಮದ್ದಳೆಯ, ಧ್ವಾನ-ಧ್ವನಿಯು, ವಾರಿದಗರ್ಜಿತಂ-ಮೇಘಧ್ವನಿಯೋ, ದಿವಿಷದಾಂ-ದೇವತೆಗಳ, ದೃಷ್ಟಿಚ್ಛಟಾ-ಕಣ್ಣಳಸಾಲು, ಚಂಚಲಾ-ಮಿಂಚೋ, ಭಕ್ತಾನಾಂ-ಭಕ್ತರ, ಪರಿತೋಷಬಾಷ್ಪವಿತತಿಃ-ಸಂತೋಷ ಬಾಷ್ಪಗಳ ಧಾರೆಗಳು, ವೃಷ್ಟಿಃ-ಮಳೆಯೋ, ಶಿವಾ-ಪಾರ್ವತಿಯು, ಮಯೂರೀ-ಹೆಣ್ಣುನವಿಲೋ, ಇಂಥಾ, ಉಜ್ವಲತಾಂಡವಂ-ಪ್ರಕಾಶವಾದ ನಟನವು, ವಿಜಯತೇ-ಸರ್ವೋತ್ತಮವಾಗುತ್ತಲಿದೆಯೋ, ತಂ-ಅಂಥಾ, ನೀಲಕಂಠಂ-ಪರಮೇಶ್ವರನನ್ನು, ಭಜೇ-ಹೊಂದುತ್ತಲಿದೇನೆ, ಎಂದರೆ ಸಂಧ್ಯಾತಾಂಡವನಾದ ದೇವರಂ ಭಜಿಸುತ್ತೇನೆಂದು ಭಾವವು.

ಆದ್ಯಾಯಾಮಿತ ತೇಜಸೇ ಶ್ರುತಿಪದೈರ್ವೇದ್ಯಾಯ ಸಾಧ್ಯಾಯ ತೇ ।
ವಿದ್ಯಾನಂದ ಮಯಾತ್ಮನೇ ತ್ರಿಜಗತಸ್ಸಂರಕ್ಷಣೋದ್ಯೋಗಿನೇ ॥
ಧ್ಯೇಯಾಯಾಖಿಲ ಯೋಗಿಭಿಸ್ಸುರಗಣೈರ್ಗೇಯಾಯ ಮಾಯಾವಿನೇ ।
ಸಮ್ಯಕ್ತಾಂಡವಸಂಭ್ರಮಾಯ ಜಟಿನೇ ಸೇಯಂನತಿಶ್ಶಂಭವೇ ॥೫೫॥

ಅವತಾರಿಕೆ॥ ಪರಮೇಶ್ವರನ ಗುಣಗಳನ್ನು ಪ್ರಸ್ತುತಿಸಿ ಅಂಥಾ ಗುಣವಿಶಿಷ್ಟನಾದ ಪರಮೇಶ್ವರನಿಗೆ ಪ್ರಣಾಮವಂ ಮಾಡುತ್ತಾರೆ.

ಟೀ॥ ಆದ್ಯಾಯ-ಸರ್ವ ಲೋಕಗಳಿಗೂ ಆದಿಯಾಗಿಯೂ, ಅಮಿತತೇಜಸೇ-ಮಿತಿಯಿಲ್ಲದ ತೇಜಸ್ಸುಳ್ಳವನಾಗಿಯೂ, ಶ್ರುತಿಪದೈಃ-ವೇದ ಶಬ್ದಗಳಿಂದ, ವೇದ್ಯಾಯ-ತಿಳಿಯಲ್ಪಡತಕ್ಕವನಾಗಿಯೂ, ಸಾಧ್ಯಾಯ-ಭಕ್ತಾನುಗ್ರಹಕ್ಕೋಸ್ಕರ ಅರ್ಚಾದಿ ರೂಪದಿಂದ ಪೂಜ್ಯನಾಗಿಯೂ, ವಿದ್ಯಾನಂದಮಯಾತ್ಮನೇ-ಜ್ಞಾನಾನಂದಮಯನಾಗಿಯೂ, ತ್ರಿಜಗತ

ಸ್ಸಂರಕ್ಷಣೋದ್ಯೋಗಿನೇ-ತ್ರಿಲೋಕರಕ್ಷಣದಲ್ಲಿ ಪ್ರವರ್ತಿಸಿದವನಾಗಿಯೂ, ಧ್ಯೇಯಾಯ-ಧ್ಯಾನಮಾಡಲ್ಪಡತಕ್ಕವನಾಗಿಯೂ, ಅಖಿಲಯೋಗಿಭಿಃ-ಸರ್ವ ಯೋಗಿಗಳಿಂದಲೂ, ಸುರಗಣೈಃ-ದೇವಸಮೂಹಗಳಿಂದಲೂ, ಗೇಯಾಯ-ಗಾನಮಾಡಲ್ಪಡತಕ್ಕವನಾಗಿಯೂ, ಮಾಯಾವಿನೇ-ಮಾಯಾಶಕ್ತಿಯುಳ್ಳವನಾಗಿಯೂ, ಸಮ್ಯಕ್-ಚೆನ್ನಾಗಿ, ತಾಂಡವ-ನರ್ತನದ, ಸಂಭ್ರಮಾಯ-ವಿನೋದವುಳ್ಳಂಥಾ, ಜಟಿನೇ-ಜಟಾಧಾರಿಯಾಗಿ ಇರುವ, ಶಂಭವೇ-ಶುಭಪ್ರದನಾದ ಪರಮೇಶ್ವರನಿಗೆ, ಸೇಯಂ-ಇಂಥಾ ತ್ರಿಕರಣ ಕೃತವಾದ, ನತಿಃ-ನಮಸ್ಕಾರವು ಮಾಡಲ್ಪಡುತ್ತದೆಂದು ಶೇಷಾರ್ಥವು. ಎಂದರೆ ಲೋಕದ ವಂದನೆಗಳಿಗೆ ಯೋಗ್ಯಗಳಾದ ಸರ್ವಕಲ್ಯಾಣಗುಣಗಳಿಂದಲೂ ಪರಮೇಶ್ವರನು ಒಪ್ಪಿಇದಾನೆಂದು ಭಾವವು.

**ನಿತ್ಯಾಯ ತ್ರಿಗುಣಾತ್ಮನೇ ಪುರಜಿತೇ ಕಾತ್ಯಾಯನೀಶ್ರೇಯಸೇ ।**
**ಸತ್ಯಾಯಾದಿಕುಟುಂಬಿನೇ ಮುನಿಮನಃ ಪ್ರತ್ಯಕ್ಷ ಚಿನ್ಮೂರ್ತಯೇ ॥**
**ಮಾಯಾ ಸೃಷ್ಟ ಜಗತ್ರಯಾಯ ಸಕಲಾಮ್ನಾಯಾಂತ ಸಂಚಾರಿಣೇ ।**
**ಸಾಯಂ ತಾಂಡವಸಂಭ್ರಮಾಯ ಜಟಿನೇ ಸೇಯಂನತಿಶ್ಶಂಭವೇ ॥೫೬॥**

ಅವತಾರಿಕೆ ॥ ಪೂರ್ವಶ್ಲೋಕದ ರೀತಿಯಾಗಿ ಪರಮೇಶ್ವರನ ಗುಣಾಂತರವನ್ನೇ ಹೇಳುತ್ತಾರೆ.

ಟೀ॥ ನಿತ್ಯಾಯ-ನಾಶರಹಿತ ಸ್ವರೂಪನಾಗಿಯೂ, ತ್ರಿಗುಣಾತ್ಮನೇ-ತ್ರಿಗುಣಾತ್ಮಕನಾಗಿಯೂ, ಪುರಜಿತೇ-ತ್ರಿಪುರಧ್ವಂಸಕನಾಗಿಯೂ ಕಾತ್ಯಾಯನೀಶ್ರೇಯಸೇ, ಕಾತ್ಯಾಯನೀ-ಪಾರ್ವತಿಯ, ಶ್ರೇಯಸೇ-ತಪಃಫಲರೂಪನಾಗಿಯೂ, ಸತ್ಯಾಯ. ಸತ್ಯಮಹಿಮೆಯುಳ್ಳವನಾಗಿಯೂ, ಆದಿಕುಟುಂಬಿನೇ-ಜಗತ್ತಿನಲ್ಲಿ ಮೊದಲನೆಯ ಕುಟುಂಬಿಯಾಗಿ

ಮುನಿಮನಃಪ್ರತ್ಯಕ್ಷಚಿನ್ಮೂರ್ತಯೇ, ಮುನಿ-ಮುನೀಶ್ವರರ, ಮನಃ-ಮನಸ್ಸುಗಳಿಗೆ, ಪ್ರತ್ಯಕ್ಷ-ಗೋಚರವಾದ, ಚಿನ್ಮೂರ್ತಯೇ-ಚಿದಾನಂದಮೂರ್ತಿಯಾಗಿಯೂ, ಮಾಯಾಸೃಷ್ಟಜಗತ್ರಯಾಯ, ಮಾಯಾ-ಮಾಯೆಯಿಂದ, ಸೃಷ್ಟ-ಸೃಜಿಸಲ್ಪಟ್ಟ, ಜಗತ್ರಯಾಯ-ಮೂರುಲೋಕಗಳನ್ನುಳ್ಳವನಾಗಿಯೂ, ಸಕಲಾಮ್ನಾಯಾಂತಸಂಚಾರಿಣೇ-ಸರ್ವವೇದಾಂತ ಪ್ರತಿಪಾದ್ಯನಾಗಿಯೂ, ಸಾಯಂ-ಸಾಯಂಕಾಲದಲ್ಲಿ, ತಾಂಡವಸಂಭ್ರಮಾಯ-ನಟನವಿನೋದವುಳ್ಳವನಾಗಿಯೂ, ಜಟಿನೇ-ಜಟಾಧಾರಿಯಾಗಿಯೂ ಇರುವ, ಶಂಭವೇ-ಶಂಭುವಿಗೆ, ಸೇಯಂ ನತಿಃ-ತ್ರಿಕರಣಗಳಿಂದಲೂ ಮಾಡಲ್ಪಡುವ ಈ ನಮಸ್ಕಾರವು ಸಲ್ಲಿಸಲ್ಪಡುತ್ತದೆ. ಇದಕ್ಕೂ ಪೂರ್ವಶ್ಲೋಕದ ಭಾವವೇ.

ನಿತ್ಯಂ ಸ್ವೋದರಪೂರಣಾಯ ಸಕಲಾನುದ್ದಿಶ್ಯವಿತ್ತಾಶಯಾ |
ವ್ಯರ್ಥಂ ಪರ್ಯಟನಂ ಕರೋಮಿ ಭವತಸ್ಸೇವಾಂ ನಜಾನೇ ವಿಭೋ ! ||
ಮಜ್ಜನ್ಮಾಂತರಪುಣ್ಯಪಾಕಬಲತಸ್ತ್ವಂ ಶರ್ವ ಸರ್ವಾಂತರ |
ಸ್ತಿಷ್ಠಸ್ಯೇವ ಹಿತೇನ ವಾ ಪಶುಪತೇ ತೇ ರಕ್ಷಣೀಯೋಽಸ್ಮ್ಯಹಂ ||೫೭||

ಅವತಾರಿಕೆ|| ಪರಮೇಶ್ವರನ ಕೃಪೆಗೆ ವಿರೋಧಿಗಳಾದ ವ್ಯಾಪಾರಗಳನ್ನೇ ತಾವು ಮಾಡುವವರಾದರೂ ಈಶ್ವರನು ಕೇವಲ ಕೃಪೆಯಿಂದಲೇ ತಮ್ಮಂ ರಕ್ಷಿಸಬೇಕೆಂದು ಪ್ರಾರ್ಥಿಸುತ್ತಾರೆ.

ಟೀ|| ಹೇ ವಿಭೋ !-ಎಲೈ ವ್ಯಾಪಕನೇ, ! ಹೇ ಶರ್ವ !-ಎಲೈ ಮೋಕ್ಷವನ್ನೀಯುವನೇ !, ನಿತ್ಯಂ-ಯಾವಾಗಲೂ, ಸ್ವೋದರಪೂರಣಾಯ-ತನ್ನ ಹೊಟ್ಟೆ ತುಂಬುವುದಕ್ಕೋಸ್ಕರ, ವಿತ್ತಾಶಯಾ-ಧನಾಪೇಕ್ಷೆಯಿಂದ, ಸಕಲಾನ್-ಎಲ್ಲ ಜನಗಳನ್ನೂ, ಉದ್ದಿಶ್ಯ-ಕುರಿತು, ವ್ಯರ್ಥಂ-ವ್ಯರ್ಥವಾಗಿ, ಪರ್ಯಟನಂ-ತಿರುಗುವಿಕೆಯನ್ನು, ಕರೋಮಿ-ಮಾಡು

ತ್ತೀನೆ; ಭವತಃ-ನಿನ್ನ, ಸೇವಾಂ-ಸೇವೆಯನ್ನು, ನಜಾನೇ-ತಿಳಿದವನಲ್ಲ, ಹೇ ಪಶುಪತೇ! ಎಲೈ ಪಶುಪತಿಯೇ! ತ್ವಂ-ನೀನು, ಮಜ್ಜನ್ಮಾಂತರ ಪುಣ್ಯ ಪಾಕಬಲತಃ-ನನ್ನ ಜನ್ಮಾಂತರದ ಪುಣ್ಯಪರಿಪಾಕದ ಬಲದಿಂದ, ಸರ್ವಾಂ ತರಃ-ಸರ್ವಾಂತರ್ಯಾಮಿಯಾಗಿ, ತಿಷ್ಟಸ್ಯೇವ-ಇದ್ದೇ ಇರುತ್ತೀಯೇ, ಹಿತೇನವಾ-ಹಿತಮಾಡಬೇಕೆಂಬ ಮನಸ್ಸಿನಿಂದಲಾದರೂ, ಅಹಂ-ನಾನು ತೇ-ನಿನಗೆ, ರಕ್ಷಣೀಯಃ-ಕಾಪಾಡಲು ಅರ್ಹನಾಗಿ, ಅಸ್ಮಿ-ಇದೇನೆ. ಎಂದರೆ ಪರಮೇಶ್ವರನ ಪ್ರಸಾದಕ್ಕೆ ಅಕಾರಣಗಳಾದ ದುಷ್ಕರ್ಮಗ ಳನ್ನೇ ಮಾಡುವ ತನ್ನನ್ನು ಪಶುಪತಿಯು ಕೇವಲ ಕೃಪೆಯಿಂದಲೇ ಪರಿ ಪಾಲಿಸಬೇಕೆಂದು ಭಾವವು.

ಏಕೋ ವಾರಿಜಬಾಂಧವಃ ಕ್ಷಿತಿನಭೋವ್ಯಾಪ್ತಂ ತಮೋಮಂಡಲಂ ।
ಭಿತ್ವಾ ಲೋಚನಗೋಚರೋಪಿ ಭವತಿ ತ್ವಂ ಕೋಟಿಸೂರ್ಯಪ್ರಭಃ ॥
ವೇದ್ಯಃ ಕಿಂ ನಭವಸ್ಯಹೋ ಘನತರಂ ಕೀದೃಗ್ಭವೇನ್ಮತ್ತಮ ।
ಸ್ತತ್ಸರ್ವಂ ವ್ಯಪನೀಯ ಮೇ ಪಶುಪತೇ ! ಸಾಕ್ಷಾತ್ಪ್ರಸನ್ನೋಭವ ॥೫೮॥

ಅವತಾರಿಕೆ॥ ಕೋಟಿಸೂರ್ಯ ಪ್ರಕಾಶವುಳ್ಳ ಪರಮೇಶ್ವರನು ತಮಗೆ ಪ್ರತ್ಯಕ್ಷನಾಗದೇ ಇರುವುದಕ್ಕಾಗಿ ತಮ್ಮ ಅಜ್ಞಾನವನ್ನು ಕುರಿತು ಆಶ್ಚರ್ಯಪಡುತ್ತಾರೆ,

ಟೀ॥ ಹೇ ಪಶುಪತೇ !-ಎಲೈ ಪರಮೇಶ್ವರನೇ !, ಏಕಃ-ಒಬ್ಬ ನಾಗಿರುವ, ವಾರಿಜಬಾಂಧವಃ-ಕಮಲಬಂಧುವಾದ ಸೂರ್ಯನು, ಕ್ಷಿತಿನಭೋವ್ಯಾಪ್ತಂ-ಭೂಮ್ಯಾಕಾಶಗಳನ್ನು ವ್ಯಾಪಿಸಿರುವ, ತಮೋ ಮಂಡಲಂ-ಅಂಧಕಾರದ ರಾಶಿಯನ್ನು, ಭಿತ್ವಾ-ಭೇದಿಸಿದುದಲ್ಲದೇ, ಲೋಚನಗೋಚರೋಪಿ-ಪ್ರಾಣಿಗಳ ಕಣ್ಣಿಗೆ ಪ್ರತ್ಯಕ್ಷನಾಗಿಯೂ, ಭವತಿ-ಆಗುತ್ತಲಿದಾನೆ; ತ್ವಂ ನೀನು, ಕೋಟಿಸೂರ್ಯಪ್ರಭಃ-ಕೋಟಿ

ಸೂರ್ಯರಿಗೆ ಸಮಾನ ಕಾಂತಿಯುಳ್ಳವನಾಗಿದ್ದರೂ, ವೇದ್ಯಃ-ನನಗೆ ಪ್ರತ್ಯಕ್ಷನಾಗಿ, ಕಿಂ ನಭವಸಿ-ಏಕೆ ಆಗಲಿಲ್ಲ ? ಘನತರಂ-ನಿಬಿಡವಾದ ಮತ್ತಮಃ-ನನ್ನ ತಮೋಗುಣರೂಪವಾದ ಕತ್ತಲು, ಕೀದೃಕ್-ಎಂ ಥಾದ್ದಾಗಿ, ಭವೇತ್-ಆದೀತು, ಅಹೋ-ಆಶ್ಚರ್ಯವು, ತತ್ಸರ್ವಂ-ಅದನ್ನೆಲ್ಲಾ, ವ್ಯಪನೀಯ-ಪರಿಹರಿಸಿ, ಮೇ-ನನ್ನ ವಿಷಯದಲ್ಲಿ, ಸಾಕ್ಷಾತ್-ಪ್ರತ್ಯಕ್ಷನಾಗಿ, ಪ್ರಸನ್ನಃ-ದಯೆಯುಳ್ಳವನು, ಭವ-ಆಗು. ಎಂದರೆ ನನ್ನ ಅಜ್ಞಾನದ ಆವರಣದಿಂದ ಕೋಟಿಸೂರ್ಯಪ್ರಕಾಶನಾದ ನೀನು ಸಹ ನನಗೆ ಗೋಚರನಲ್ಲದೇ ಇದ್ದೀಯೆ ಆದಕಾರಣ ಅಂಥಾ ಘನವಾದ ನನ್ನ ಅಜ್ಞಾನವನ್ನು ನೀನೇ ಪರಿಹರಿಸಬೇಕೆಂದು ಭಾವವು.

ಹಂಸಃ ಪದ್ಮವನಂ ಸಮಿಚ್ಛತಿ ಯಥಾ ನೀಲಾಂಬುದಂ ಚಾತಕಃ |
ಕೋಕಃ ಕೋಕನದಪ್ರಿಯಂ ಪ್ರತಿದಿನಂ ಚಂದ್ರಂ ಚಕೋರಸ್ತಥಾ ||
ಚೇತೋ ವಾಂಛತಿ ಮಾಮಕಂ ಪಶುಪತೇ ! ಚಿನ್ಮಾರ್ಗಮೃಗ್ಯಂ ವಿಭೋ! |
ಗೌರೀನಾಥ ! ಭವತ್ಪದಾಬ್ಜಯುಗಳಂ ಕೈವಲ್ಯಸೌಖ್ಯಪ್ರದಂ ||೫೯||

ಅವತಾರಿಕೆ|| ಯಾವಾಗಲೂ ನಾವು ಅಪೇಕ್ಷಿಸುತ್ತಲಿರುವ ನಿನ್ನ ಪಾದಾಬ್ಜಯುಗಳವನ್ನು ನಮಗೆ ಈಯಬೇಕೆಂಬುವಿಕೆಯನ್ನು ದೃಷ್ಟಾಂತಸಹಿತವಾಗಿ ಹೇಳುತ್ತಾರೆ.

ಟೀ|| ಹೇ ಪಶುಪತೇ !-ಎಲೈ ಪಶುಪತಿಯೇ !, ಹೇ ವಿಭೋ!-ಎಲೈ ವ್ಯಾಪಕನೇ !, ಹೇ ಗೌರೀನಾಥ !-ಎಲೈ ಪಾರ್ವತೀಪತಿಯೇ !, ಹಂಸಃ-ಹಂಸವು, ಪದ್ಮವನಂ-ತಾವರೆಗಳ ವನವನ್ನು, ಯಥಾ-ಹೇಗೆ, ಇಚ್ಛತಿ-ಕೋರುತ್ತದೆಯೋ, ಚಾತಕಃ-ಚಾತಕಪಕ್ಷಿಯು , ನೀಲಾಂಬುದಂ-ನೀಲಮೇಘವನ್ನು, ಯಥಾ-ಹೇಗೋ, ಕೋಕಃ-ಎಣೆವಕ್ಕಿಯು, ಕೋಕನದಪ್ರಿಯಂ-ಸೂರ್ಯನನ್ನು, ಯಥಾ-ಹೇಗೆಯೋ, ಚಕೋರಃ-

ಚಕೋರವೆಂಬ ಪಕ್ಷಿಯು, ಪ್ರತಿದಿನಂ-ಪ್ರತಿದಿನವೂ, ಚಂದ್ರಂ-ಚಂದ್ರನನ್ನು, ಯಥಾ-ಹೇಗೆಯೋ, ತಥಾ-ಆಮೇರೆ, ಮಾಮಕಂ-ನನ್ನ ಸಂಬಂಧಿಯಾದ, ಚೇತಃ-ಮನಸ್ಸು, ಚಿನ್ಮಾರ್ಗಮೃಗ್ಯಂ-ಜ್ಞಾನಮಾರ್ಗದಿಂದ ಹುಡುಕಲ್ಪಡತಕ್ಕಂಥಾ, ಕೈವಲ್ಯಸೌಖ್ಯಪ್ರದಂ-ಮೋಕ್ಷಾನಂದವನ್ನೀಯುವಂಥಾ, ಭವತ್ಪದಾಬ್ಜಯುಗಳಂ-ನಿನ್ನ ಪಾದಾಂಬುಜಗಳ ಜೊತೆಯನ್ನು, ವಾಂಛತಿ-ಇಚ್ಛಿಸುತ್ತಲಿದೆ, ಎಂದರೆ ಯಾವಾಗಲೂ ನಿನ್ನ ಪಾದಾಂಬುಜ ಪ್ರಾಪ್ತಿಯನ್ನೇ ಅಪೇಕ್ಷಿಸುತ್ತೇನೆಂದು ಭಾವವು.

ರೋಧಸ್ತೋಯಹೃತಶ್ಶ್ರಮೇಣಪಥಿಕಶ್ಛಾಯಾಂ ತರೋರ್ವೃಷ್ಟಿತಃ ।
ಭೀತಸ್ಸ್ವಸ್ಥಗೃಹಂ ಗೃಹಸ್ಥಮತಿಥಿರ್ದೀನಃ ಪ್ರಭುಂ ಧಾರ್ಮಿಕಂ ॥
ದೀಪಂ ಸಂತಮಸಾಕುಲಶ್ಚ ಶಿಖಿನಂ ಶೀತಾವೃತಸ್ತ್ವಂ ತಥಾ ।
ಚೇತಸ್ಸರ್ವಭಯಾಪಹಂ ವ್ರಜ ಸುಖಂ ಶಂಭೋಃ ಪದಾಂಭೋರುಹಂ ॥೬೦॥

ಅವತಾರಿಕೆ॥ ಪರಮೇಶ್ವರನ ಪದಾಬ್ಜವೇ ತಮ್ಮ ಮನಸ್ಸಿಗೆ ಸರ್ವದುಃಖಹರವೆನ್ನುತ್ತಾರೆ.

ಟೀ॥ ಹೇ ಚೇತಃ !-ಎಲೈ ಹೃದಯವೇ !, ತೋಯಹೃತಃ—ಬಾಯಾರಿದವನು, ರೋಧಃ-ನದಿಯ ತೀರವನ್ನು, ಯಥಾ-ಹೇಗೆ ಆಶ್ರಯಿಸುವನೋ, ಪಥಿಕಃ-ದಾರಿ ನಡೆಯುವನು, ಶ್ರಮೇಣ-ಆಯಾಸದಿಂದ, ತರೋಃ-ವೃಕ್ಷದ, ಛಾಯಾಂ-ನೆರಳನ್ನು, ಯಥಾ-ಹೇಗೆಯೋ, ವೃಷ್ಟಿತಃ-ಮಳೆಯ ದೆಸೆಯಿಂದ, ಭೀತಃ-ಹೆದರಿದವನು, ಸ್ವಸ್ಥಗೃಹಂ-ಗಟ್ಟಿಯಾದ ಮನೆಯನ್ನು, ಯಥಾ-ಹೇಗೆಯೋ, ಅತಿಥಿಃ-ಅನ್ನಕ್ಕೆ ಬರುವನು, ಗೃಹಸ್ಥಂ-ಗೃಹಸ್ಥನನ್ನು, ಯಥಾ-ಹೇಗೆಯೋ, ದೀನಃ-ಬಡವನು, ಧಾರ್ಮಿಕಂ-ದಾತನಾದ, ಪ್ರಭುಂ-ಅರಸನನ್ನು, ಯಥಾ-ಹೇಗೆಯೋ, ಸಂತಮಸಾಕುಲಃ-ಕತ್ತಲೆಯಿಂದ ಸಂಕಟಪಡುವನು,

ದೀಪಂ-ದೀಪವನ್ನು, ಯಥಾ-ಹೇಗೆಯೋ, ಶೀತಾವೃತಃ-ಛಳಿಯಿಂದ ಬಾಧಿಸಲ್ಪಟ್ಟಿರುವನು, ಶಿಖಿನಂ-ಅಗ್ನಿಯನ್ನು, ಯಥಾ-ಹೇಗೆಯೋ, ತಥಾ-ಆಮೇಲೆ, ತ್ವಂ-ನೀನು, ಸರ್ವಭಯಾಪಹಂ-ಸಮಸ್ತ ಭಯಗಳನ್ನೂ ಪರಿಹರಿಸುವಂಥಾ, ಶಂಭೋಃ-ಪರಮೇಶ್ವರನ, ಪದಾಂಭೋರುಹಂ-ಪಾದಾಬ್ಜವನ್ನು, ಸುಖಂ-ಸುಖವಾಗಿ, ವ್ರಜ-ಹೊಂದು. ಎಂದರೆ ಶಿವಪಾದಾಬ್ಜಪ್ರಾಪ್ತಿಯೇ ಹೃದಯಾನಂದಕರವೆಂದು ಭಾವವು.

**ಅಂಕೋಲಂ ನಿಜಬೀಜಸಂತತಿರಯಸ್ಕಾಂತೋಪಲಂ ಸೂಚಿಕಾ |**
**ಸಾಧ್ವೀನೈಜವಿಭುಂ ಲತಾ ಕ್ಷಿತಿರುಹಂ ಸಿಂಧುಃ ಸರಿದ್ವಲ್ಲಭಂ ||**
**ಪ್ರಾಪ್ನೋತೀಹ ಯಥಾ ತಥಾ ಪಶುಪತೇಃ ಪಾದಾರವಿಂದದ್ವಯಂ |**
**ಚೇತೋವೃತ್ತಿರುಪೇತ್ಯ ತಿಷ್ಠತಿ ಸದಾ ಸಾ ಭಕ್ತಿರಿತ್ಯುಚ್ಯತೇ ||೬೧||**

ಅವತಾರಿಕೆ|| ಏಕಾಗ್ರವೃತ್ತಿಯಾಗಿ ಮನಸ್ಸು ಶಿವಪಾದಾರವಿಂದವಂ ಹೊಂದುವಿಕೆಯೇ ಭಕ್ತಿಯೆಂದು ಹೇಳುತ್ತಾರೆ.

ಟೀ|| ನಿಜಬೀಜಸಂತತಿಃ-ತನ್ನ ಬೀಜಗಳ ಸಮೂಹವು, ಅಂಕೋಲಂ-ಅಂಕೋಲವೃಕ್ಷವನ್ನು, ಯಥಾ-ಹೇಗೆ, ಪ್ರಾಪ್ನೋತಿ-ಹೊಂದುತ್ತಲಿದೆಯೋ, ಸೂಚಿಕಾ-ಸೂಜಿಯು, ಅಯಸ್ಕಾಂತೋಪಲಂ, ಅಯಸ್ಕಾಂತ-ಸೂಚಿಕಾಂತದ, ಉಪಲಂ-ಕಲ್ಲನ್ನು ಹೇಗೆಯೋ, ಸಾಧ್ವೀ-ಪತಿವ್ರತೆಯು, ನೈಜವಿಭುಂ-ತನ್ನ ಪತಿಯನ್ನು ಹೇಗೆಯೋ, ಲತಾ-ಬಳ್ಳಿಯು, ಕ್ಷಿತಿರುಹಂ-ವೃಕ್ಷವನ್ನು ಹೇಗೆಯೋ, ಸಿಂಧುಃ-ಮಹಾನದಿಯು, ಸರಿದ್ವಲ್ಲಭಂ-ನದಿಗಳ ನಾಥನಾದ ಸಮುದ್ರವನ್ನುಹೇಗೆಯೋ ತಥಾ-ಆಮೇಲೆ, ಚೇತೋವೃತ್ತಿಃ-ಮನೋವೃತ್ತಿಯು, ಪಶುಪತೇಃ-ಪಶುಪತಿಯ, ಪಾದಾರವಿಂದದ್ವಯಂ-ಪಾದಪದ್ಮಗಳ ಜತೆಯನ್ನು, ಉಪೇತ್ಯ-ಆಶ್ರಯಿಸಿ, ಸದಾ-ಯಾವಾಗಲೂ,ಸ್ಥಿತಂಯದಿ-ನಿಂತರೆ, ಸಾ-

ಅಂಥಾ ವೃತ್ತಿಯು, ಭಕ್ತಿಃಇತಿ-ಭಕ್ತಿಯೆಂಬದಾಗಿ, ಉಚ್ಯತೇ-ಹೇಳಲ್ಪಡುತ್ತದೆ. ಎಂದರೆ ಏಕಾಗ್ರಚಿತ್ತತೆಯಿಂದ ಅವಿಚ್ಛಿನ್ನವಾದ ಶಿವಪಾದಾಬ್ಜಧ್ಯಾನವೇ ಭಕ್ತಿಯೆಂದು ಭಾವವು.

**ಆನಂದಾಶ್ರುಭಿರಾತನೋತಿ ಪುಲಕಂ ನೈರ್ಮಲ್ಯತಶ್ಛಾದನಂ |**
**ವಾಚಾ ಶಂಖಮುಖೇ ಸ್ಥಿತೈಶ್ಚ ಜಠರಾಪೂರ್ತಿಂ ಚರಿತ್ರಾಮೃತೈಃ ||**
**ರುದ್ರಾಕ್ಷೈರ್ಭಸಿತೇನ ದೇವ ! ವಪುಷೋ ರಕ್ಷಾಂ ಭವದ್ಭಾವನಾ |**
**ಪರ್ಯಂಕೇ ವಿನಿವೇಶ್ಯ ಭಕ್ತಿಜನನೀ ಭಕ್ತಾರ್ಭಕಂ ರಕ್ಷತಿ ||೬೨||**

ಅವತಾರಿಕೆ|| ತಾಯಿಯು ಶಿಶುಗಳನ್ನು ರಕ್ಷಿಸುವಂತೆ ಶಿವಭಕ್ತಿಯೆಂಬುದು ಭಕ್ತರನ್ನು ರಕ್ಷಿಸುತ್ತದೆಂದು ಹೇಳುತ್ತಾರೆ.

ಟೀ|| ಹೇ ದೇವ !-ಎಲೈ ಮಹಾದೇವನೇ !, ಭಕ್ತಿ ಜನನೀ-ನಿನ್ನ ಭಕ್ತಿಯೆಂಬ ತಾಯಿಯು, ಭಕ್ತಾರ್ಭಕಂ-ಭಕ್ತನೆಂಬ ಮಗುವನ್ನು, ಆನಂದಾಶ್ರುಭಿಃ-ಆನಂದ ಬಾಷ್ಪಗಳಿಂದ, ಪುಳಕಂ-ರೋಮಾಂಕುರವನ್ನು, ಆತನೋತಿ-ಮಾಡಿಸುತ್ತದೆ; ನೈರ್ಮಲ್ಯತಃ-ನಿರ್ಮಲಭಾವದಿಂದ ಛಾದನಂ-ಹೊದ್ದಿಸುವಿಕೆಯನ್ನುಮಾಡಿಸುತ್ತದೆ; ವಾಚಾಶಂಖಮುಖೇ ಸ್ಥಿತೈಃ, ವಾಚಾ-ವಾಕ್ಕೆಂಬ, ಶಂಖಮುಖೇ-ಶಂಖದ ಕೊನೆಯಲ್ಲಿ, ಸ್ಥಿತೈಃ-ಇರುವಂಥಾ, ಚರಿತಾಮೃತೈಃ-ನಿನ್ನ ಚರಿತ್ರಗಳೆಂಬ ಹಾಲುಗಳಿಂದ, ಜಠರಾಪೂರ್ತಿಂ-ಹೊಟ್ಟೆ ತುಂಬುವಿಕೆಯನ್ನು ಮಾಡಿಸುತ್ತದೆ, ರುದ್ರಾಕ್ಷೈಃ-ರುದ್ರಾಕ್ಷಗಳಿಂದಲೂ, ಭಸಿತೇನ-ಭಸ್ಮದಿಂದಲೂ, ವಪುಷೋ-ದೇಹದ, ರಕ್ಷಾಂ-ರಕ್ಷಣೆಯನ್ನು ಮಾಡಿಸುತ್ತದೆ, ಭವದ್ಭಾವನಾ ಪರ್ಯಂಕೇ-ನಿನ್ನಧ್ಯಾನವೆಂಬ ಮಂಚದಲ್ಲಿ, ವಿನಿವೇಶ್ಯ-ಇರಿಸಿ, ರಕ್ಷತಿ-ರಕ್ಷಿಸುತ್ತದೆ. ಎಂದರೆ ಸ್ವಕಾರ್ಯದಲ್ಲಿ ಕೇವಲ ಅಶಕ್ತನಾದ ಭಕ್ತನನ್ನು ನಿನ್ನ ಭಕ್ತಿಯೇ ರಕ್ಷಿಸಬೇಕೇ ಹೊರತು ಇತರ ರಕ್ಷಕರಿಲ್ಲವೆಂದು ಭಾವವು.

**ಮಾರ್ಗಾವರ್ತಿತಪಾದುಕಾ ಪಶುಪತೇರಂಗಸ್ಯ ಕೂರ್ಚಾಯತೇ |**
**ಗಂಡೂಷಾಂಬುನಿಷೇಚನಂ ಪುರರಿಪೋರ್ದಿವ್ಯಾಭಿಷೇಕಾಯತೇ ||**
**ಕಿಂಚಿದ್ಭಕ್ಷಿತ ಮಾಂಸಶೇಷ ಕಬಳಂ ನವ್ಯೋಪಹಾರಾಯತೇ |**
**ಭಕ್ತಿಃ ಕಿಂ ನಕರೋತ್ಯಹೋ ವನಚರೋ ಭಕ್ತಾವತಂಸಾಯತೇ ||೬೩||**

ಅವತಾರಿಕೆ|| ಕೇವಲ ಭಕ್ತಿಯ ಮಹಿಮೆಯಿಂದ ಈಶ್ವರನ ವಿಷಯದಲ್ಲಿ ಮನುಷ್ಯನಿಂದ ಮಾಡಲ್ಪಡುವ ನೀಚವಾದ ಕಾರ್ಯವೂ ಅವನಿಗೆ ಭೋಗ್ಯವಾಗುತ್ತದೆಂದು ಹೇಳುತ್ತಾರೆ.

ಟೀ|| ಮಾರ್ಗಾವರ್ತಿತಪಾದುಕಾ-ಮಾರ್ಗ ನಡೆದು ತೇಯ್ದ ಪಾದರಕ್ಷೆಯು, ಪಶುಪತೇಃ-ಪಶುಪತಿಯ, ಅಂಗಸ್ಯ-ಶರೀರಕ್ಕೆ, ಕೂರ್ಚಾಯತೇ-ಕಣ್ಣು ಹುಬ್ಬುಗಳ ಮಧ್ಯಸ್ಥಾನದಂತೆ ಆಗುತ್ತದೆ, ಗಂಡೂಷಾಂಬುನಿಷೇಚನಂ-ಉಗುಳುವ ನೀರಿನಿಂದ ನನೆಸುವಿಕೆಯು, ಪುರರಿಪೋಃ-ತ್ರಿಪುರಾಂತಕನಿಗೆ, ದಿವ್ಯಾಭಿಷೇಕಾಯತೇ-ಗಂಗಾತೀರ್ಥದ ಅಭಿಷೇಕದಂತೆ ಆಗುತ್ತದೆ, ಕಿಂಚಿದ್ಭಕ್ಷಿತಮಾಂಸಶೇಷಕಬಳಂ-ಸ್ವಲ್ಪ ತಿಂದು ಮಿಕ್ಕಿದ್ದ ಮಾಂಸದ ತುತ್ತು, ನವ್ಯೋಪಹಾರಾಯತೇ-ಹೊಸ ನೈವೇದ್ಯವಾಗುತ್ತದೆ, ವನಚರಃ-ಬೇಡನು, ಭಕ್ತಾವತಂಸಾಯತೇ-ಭಕ್ತಶ್ರೇಷ್ಠನಾಗುತ್ತಾನೆ, ಅಹೋ-ಆಶ್ಚರ್ಯವು; ಭಕ್ತಿಃ-ಭಕ್ತಿಯು, ಕಿಂ ನಕರೋತಿ-ಯಾವುದನ್ನು ಮಾಡುವುದಿಲ್ಲ.

ಎಂದರೆ ಈಶ್ವರ ಭಕ್ತಿಯೇ ದೊಡ್ಡದು, ಅದನ್ನೇ ದೇವರು ಕೊಂಡಾಡುವನು ಅಲ್ಲದೆ ಮನುಷ್ಯರು ಕೊಂಡಾಡುವ ಜಾತಿ, ಕುಲ, ವರ್ಣಾಶ್ರಮ, ಸಂಪ್ರದಾಯ, ಆಚಾರಗಳು, ಉಪಚಾರಗಳು, ಪದಾರ್ಥಗಳು, ಪೂಜಾವಿಧಿಗಳು, ಮುಂತಾದುವುಗಳತಾರತಮ್ಯಗಳು, ಇವುಗಳನ್ನು ದೇವರು ಗಣಿಸಲಾರನು; ಹೇಗೆಂದರೆ, ಶ್ರೀಕಾಳಹಸ್ತೀಶ್ವರ ದೇವರಲ್ಲಿ ಅತ್ಯಂತ ಭಕ್ತಿಯುಕ್ತನಾದ ಒಬ್ಬಬೇಡನು ಅರಣ್ಯದಲ್ಲಿ ಆ ಲಿಂಗವಿ

ರುವ ಸ್ಥಾನಕ್ಕೆ ಬಂದು ನಿತ್ಯವೂ ಪೂಜೆಮಾಡುತ್ತಿದ್ದನು, ಅದೆಂತೆನೆ,ನದಿಯ ನೀರನ್ನು ಬಾಯಿಂದ ತಂದು ದೇವರಮೇಲೆ ಉಗುಳಿ ಅಭಿಷೇಕವಂ ಮಾಡಿಸಿ, ತಾನು ಸ್ವಲ್ಪ ತಿಂದುನೋಡಿ ಚೆನ್ನಾಗಿದ್ದರೆ ಮಿಕ್ಕ ಮಾಂಸವನ್ನು ದೇವರಿಗೆ ಕೊಡುವನು, ಅದಂ ದೇವರು ಭುಜಿಸುತ್ತಾ ಇದ್ದನು; ಹೀಗಿರುವಾಗ, ಒಂದು ಕಾಲದಲ್ಲಿ, ಅವನ ಭಕ್ತಿಯನ್ನು ಮತ್ತೊಬ್ಬನಿಗೆ ತೋರಿಸಬೇಕಾದ ಪ್ರಕೃತವುಂಟಾದುದರಿಂದ,ದೇವರು ಆಬೇಡನು ಬರುವ ಹೊತ್ತಿಗೆ ತನ್ನ ಒಂದು ಕಣ್ಣು ಒಡೆದುಹೋದ ಹಾಗೆ ನೀರು ಸುರಿಯುತ್ತಾ ಇರುವ ಬಗೆಯಂ ತೋರಿಸಲು, ಬೇಡನು ಅದಂಕಂಡು ಬಹಳ ದುಃಖದೊಂದಿಗೆ ಬಹಳ ಅತ್ತು ತನ್ನ ಕುಡುಗೋಲಿನಿಂದ ತನ್ನ ಒಂದು ಕಣ್ಣನ್ನು ಕಿತ್ತು ದೇವರ ಕಣ್ಣಿನ ಸ್ಥಾನದಲ್ಲಿ ಇಕ್ಕಲು ಅದು ಅಲ್ಲೇ ಹತ್ತಿಕೊಂಡಿತು, ಆದಕ್ಕಾಗಿ ಅವನು ಬಹಳ ಸಂತೋಷಪಟ್ಟು ತನಗೆ ಒಂದು ಕಣ್ಣು ಹೋದುದನ್ನು ಲಕ್ಷ್ಯಮಾಡದೆ ಮನೆಗೆ ಹೋದನು,ಮಾರನೆಯ ದಿನ ಪೂಜೆಯ ಹೊತ್ತಿಗೆ ಬೇಡನು ಬರಲು ದೇವರಿಗೆ ಮತ್ತೊಂದು ಕಣ್ಣೂ ಒಡೆದುಹೋಗಿರುವುದನ್ನು ನೋಡಿ ಪೂರ್ವದಿನಕ್ಕಿಂತಲೂ ಹೆಚ್ಚಾಗಿ ದುಃಖಿಸಿ ತನಗೆ ಉಳಿದಿರುವ ಒಂದು ಕಣ್ಣನ್ನು ಕಿತ್ತು ದೇವರ ಕಣ್ಣಿನಸ್ಥಾನದಲ್ಲಿಡುವಂತೆ ನಿಶ್ಚಯಿಸಿ ಅದನ್ನು ಕಿತ್ತಮೇಲೆ ದೇವರ ಕಣ್ಣಿನ ಸ್ಥಾನವು ತನಗೆ ತಿಳಿಯದೇ ಹೋಗುವುದರಿಂದ ಅದರ ಗುರುತಿಗೋಸ್ಕರ ದೇವರ ಹುಬ್ಬುಗಳ ಮಧ್ಯದಲ್ಲಿ ತನ್ನ ಎಕ್ಕಡದ ಕಾಲನ್ನು ಗುರುತಾಗಿ ಇಟ್ಟುಕೊಂಡು ತನ್ನ ಕಣ್ಣನ್ನು ಕೀಳುವುದಕ್ಕೆ ಯತ್ನಿಸಲು ತತ್ಕ್ಷಣದಲ್ಲಿ ದೇವರು ಅವನ ಭಕ್ತಿಯಿಂದ ಸಂತುಷ್ಟನಾಗಿ ಪ್ರತ್ಯಕ್ಷನಾಗಿ ಅವನಿಗೆ ತನ್ನ ಸಾಲೋಕ್ಯವನ್ನಿತ್ತು ಅವನನ್ನು ಪ್ರಮಥಗಣಗಳಲ್ಲಿ ಒಬ್ಬನನ್ನಾಗಿ ಮಾಡಿದನೆಂಬದಾಗಿ ಕಾಳಹಸ್ತೀಕ್ಷೇತ್ರ ಮಹಾತ್ಮ್ಯದಿಂದ ತಿಳಿಯಬರುತ್ತದೆಯಾಗಿ ದೇವರು ಭಕ್ತಿಯಿಂದಲೇ ಪ್ರಸನ್ನ

ನಾಗುತ್ತಾನೆಂದು ಭಾವವು.

ವಕ್ಷಸ್ತಾಡನಮಂತಕಸ್ಯ ಕಠಿನಾಪಸ್ಮಾರಸಂಮರ್ದನಂ |
ಭೂಭೃತ್ಪರ್ಯಟನಂ ನಮತ್ಸುರಶಿರಃಕೋಟೀರಸಂಘರ್ಷಣಂ ||
ಕರ್ಮೇದಂ ಮೃದುಳಸ್ಯ ತಾವಕ ಪದದ್ವಂದ್ವಸ್ಯ ಗೌರೀಪತೇ ! |
ಮಚ್ಚೇತೋಮಣಿಪಾದುಕಾವಿಹರಣಂ ಶಂಭೋ ! ಸದಾಂಗೀಕುರು ||೬೪||

ಅವತಾರಿಕೆ|| ಅತಿ ಮೃದುಗಳಾದ ಪರಮೇಶ್ವರನ ಪಾದಾಬ್ಜಗಳಿಗೆ ತನ್ನ ಮನಸ್ಸೆಂಬ ರತ್ನಮಯ ಪಾದರಕ್ಷೆಯನ್ನು ಅರ್ಪಿಸುತ್ತಾರೆ.

ಟೀ|| ಹೇ ಗೌರೀಪತೇ !-ಎಲೈ ಪಾರ್ವತೀನಾಥನೇ !, ಹೇ ಶಂಭೋ !-ಎಲೈ ಶುಭಕರನೇ !, ಅಂತಕಸ್ಯ-ಯಮನ, ವಕ್ಷಸ್ತಾಡನಂ-ಎದೆಯಲ್ಲಿ ಒದೆಯುವಿಕೆಯು, ಕಠಿನಾಪಸ್ಮಾರಸಮ್ಮರ್ದನಂ, ಕಠಿಣ-ಕಠಿಣವಾದ, ಅಪಸ್ಮಾರ-ಅಪಸ್ಮಾರಾಸುರನ, ಸಮ್ಮರ್ದನಂ-ತುಳಿಯುವಿಕೆಯು, ಭೂಭೃತ್ಪರ್ಯಟನಂ-ಬೆಟ್ಟದಲ್ಲಿ ತಿರುಗುವಿಕೆಯು, ನಮತ್ಸುರಶಿರಃಕೋಟೀರಸಂಘರ್ಷಣಂ, ನಮತ್-ನಮಸ್ಕರಿಸುವಂಥಾ, ಸುರಶಿರಃ-ದೇವತೆಗಳ ಶಿರಸ್ಸಿನಲ್ಲಿರುವ, ಕೋಟೀರ-ಕಿರೀಟಗಳ, ಸಂಘರ್ಷಣಂ-ಒತ್ತುವಿಕೆಯು, ಇದಂ-ಇಂಥಾ, ಕರ್ಮ-ಕಾರ್ಯವು, ಮೃದುಳಸ್ಯ-ಮೃದುವಾದ, ತಾವಕ-ನಿನ್ನ ಸಂಬಂಧಿಯಾದ, ಪದದ್ವಂದ್ವಸ್ಯ-ಪಾದದ್ವಯಕ್ಕೆ, ಯುಕ್ತವಲ್ಲವೆಂದು ಅಧ್ಯಾಹಾರವು; ಆದುದರಿಂದ ಮಚ್ಚೇತೋಮಣಿಪಾದುಕಾವಿಹರಣಂ, ಮಚ್ಚೇತಃ-ನನ್ನ ಮನಸ್ಸೆಂಬ ಮಣಿಪಾದುಕಾ-ರತ್ನಮಯವಾದ ಪಾದರಕ್ಷೆಯಲ್ಲಿ, ವಿಹರಣಂ-ಸಂಚಾರವನ್ನು, ಸದಾ-ಯಾವಾಗಲೂ, ಅಂಗೀಕುರು-ಅಂಗೀಕರಿಸು; ಎಂದರೆ ತನ್ನ ಹೃದಯವು ಪಾದರಕ್ಷೆಯಂತೆ ಪರಮೇಶ್ವರನ ಪಾದಗಳನ್ನು ಹೊಂದಿ ಇರಬೇಕೆಂದು ಭಾವವು.

**ವಕ್ಷಸ್ತಾಡನಶಂಕಯಾ ವಿಚಲಿತೋ ವೈವಸ್ವತೋ ನಿರ್ಜರಾಃ |**
**ಕೋಟೀರೋಜ್ವಲರತ್ನದೀಪಕಲಿಕಾನೀರಾಜನಂ ಕುರ್ವತೇ ||**
**ದೃಷ್ಟ್ವಾ ಮುಕ್ತಿವಧೂಸ್ತನೋತಿ ನಿಭೃತಾಶ್ಲೇಷಂ ಭವಾನೀಪತೇ ! |**
**ಯಚ್ಚೇತಸ್ತವಪಾದಪದ್ಮಭಜನಂ ತಸ್ಯೇಹ ಕಿಂ ದುರ್ಲಭಂ ||೬೫||**

ಅವತಾರಿಕೆ||ಶಿವಪಾದಭಜನಪರವಾದ ಹೃದಯವುಳ್ಳವನಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆನ್ನುತ್ತಾರೆ.

ಟೀ|| ಹೇ ಭವಾನೀಪತೇ !-ಎಲೈ ಪಾರ್ವತೀಪತಿಯೇ!, ಯಚ್ಚೇತಃ-ಯಾವನ ಹೃದಯವು, ತವ-ನಿನ್ನ, ಪಾದಪದ್ಮಭಜನಂ, ಪಾದಪದ್ಮ-ಪಾದಾಂಬುಜವನ್ನು, ಭಜನಂ-ಭಜಿಸುವಂತಹಾದ್ದಾಗಿ ಇದೆಯೋ ಅಂಥಾವನನ್ನು, ದೃಷ್ಟ್ವಾ-ನೋಡಿ, ವೈವಸ್ವತಃ-ಸೂರ್ಯನ ಮಗನಾದ ಯಮನು, ವಕ್ಷಸ್ತಾಡನಶಂಕಯಾ-ಎದೆಯಮೇಲೆ ಒದೆಯುತ್ತದೆಂಬ ಶಂಕೆಯಿಂದ, ವಿಚಲಿತಃ-ಓಡಿಹೋಗುತ್ತಾನೋ, ನಿರ್ಜರಾಃ-ದೇವತೆಗಳು, ಕೋಟೀರೋಜ್ವಲರತ್ನದೀಪಕಲಿಕಾನೀರಾಜನಂ, ಕೋಟೀರ-ಕಿರೀಟಗಳಲ್ಲಿ, ಉಜ್ವಲ-ಪ್ರಕಾಶವಾದ, ರತ್ನ-ರತ್ನಗಳೆಂಬ, ದೀಪಕಲಿಕಾ-ದೀಪಗಳ ಅಂಕುರಗಳಿಂದ, ನೀರಾಜನಂ-ದೀಪಾರತಿಯನ್ನು, ಕುರ್ವತೇ-ಮಾಡುತ್ತಾರೋ, ಮುಕ್ತಿವಧೂ-ಮುಕ್ತಿಯೆಂಬ ಕಾಂತೆಯು, ನಿಭೃತಾಶ್ಲೇಷಂ-ಗಾಢಾಲಿಂಗನವನ್ನು, ತನೋತಿ-ಮಾಡುತ್ತಾಳೋ, ತಸ್ಯ-ಅಂಥಾವನಿಗೆ, ಇಹ-ಈ ಲೋಕದಲ್ಲಿ, ಕಿಂ-ಯಾವುದು, ದುರ್ಲಭಂ-ಹೊಂದುವದಶಕ್ಯವಾದುದು ? ಎಂದರೆ ಶಿವಪಾದಾಬ್ಜಭಜನವಂ ಮಾಡುವವನಿಗೆ ನಿತ್ಯವೂ ತ್ರಿಲೋಕಾಧಿಪತ್ಯವೂ ಮುಕ್ತಿಯೂ ಸಹ ಸುಲಭವಾಗಿರ್ಪುವೆಂದು ಭಾವವು.

**ಕ್ರೀಡಾರ್ಥಂ ಸೃಜಸಿ ಪ್ರಪಂಚಮಖಿಲಂ ಕ್ರೀಡಾಮೃಗಾಸ್ತೇ ಜನಾಃ |**
**ಯತ್ಕರ್ಮಾಚರಿತಂ ಮಯಾಚ ಭವತಃ ಪ್ರೀತ್ಯೈ ಭವತ್ಯೇವ ತತ್ ||**

**ಶಂಭೋಸ್ಸ್ವಸ್ಯ ಕುತೂಹಲಸ್ಯ ಕರಣಂ ಮಚ್ಚೇಷ್ಟಿತಂ ನಿಶ್ಚಿತಂ |**
**ತಸ್ಮಾನ್ಮಾಮಕರಕ್ಷಣಂ ಪಶುಪತೇ ಕರ್ತವ್ಯಮೇವ ತ್ವಯಾ ||೬೬||**

ಅವತಾರಿಕೆ|| ತಮ್ಮ ರಕ್ಷಣವು ಪರಮೇಶ್ವರನಿಗೆ ಅವಶ್ಯಕರ್ತವ್ಯವೆಂದು ಹೇಳುತ್ತಾರೆ.

ಟೀ|| ಹೇ ಶಂಭೋ !-ಎಲೈ ಶುಭಕರನೇ !, ಹೇ ಪಶುಪತೇ !-ಎಲೈ ಪಶುಪತಿಯೇ !, ತ್ವಂ-ನೀನು, ನಿಖಿಲಂ-ಸಮಸ್ತವಾದ, ಪ್ರಪಂಚಂ-ಲೋಕವನ್ನು, ಕ್ರೀಡಾರ್ಥಂ-ವಿಹಾರಾರ್ಥವಾಗಿ, ಸೃಜಸಿ-ಸೃಷ್ಟಿಸುತ್ತಲಿದೀಯೆ, ಜನಾಃ-ಪ್ರಾಣಿಗಳು, ತೇ-ನಿನಗೆ, ಕ್ರೀಡಾಮೃಗಾಃ-ವಿಹಾರಾರ್ಥವಾದ ಮೃಗಗಳು, ಮಯಾಚ-ನನ್ನಿಂದಲೂ, ಯತ್-ಯಾವ, ಕರ್ಮ-ಕಾರ್ಯವು, ಆಚರಿತಂ-ಮಾಡಲ್ಪಟ್ಟಿತೋ, ತತ್-ಅದು, ಭವತಃ-ನಿನ್ನ, ಪ್ರೀತ್ಯೈ-ಪ್ರೀತಿಗೋಸ್ಕರ, ಭವತ್ಯೇವ-ಆಗಲೇ ಆಗುತ್ತದೆ; ಮಚ್ಚೇಷ್ಟಿತಂ-ನನ್ನ ಕೆಲಸವು, ಸ್ವಸ್ಯ-ನಿನ್ನ, ಕುತೂಹಲಸ್ಯ-ಸಂತೋಷಕ್ಕೆ, ಕರಣಂ-ಕಾರಣವಾಗಿ, ನಿಶ್ಚಿತಂ-ನಿಶ್ಚಯಿಸಲ್ಪಟ್ಟಿದೆ, ತಸ್ಮಾತ್-ಆದುದರಿಂದ, ಮಾಮಕರಕ್ಷಣಂ-ನನ್ನ ರಕ್ಷಣವು, ತ್ವಯಾ-ನಿನ್ನಿಂದ, ಕರ್ತವ್ಯಮೇವ-ಅವಶ್ಯ ಮಾಡತಕ್ಕುದಾಗಿದೆ, ಎಂದರೆ ನೀನು ವಿಹಾರಾರ್ಥವಾಗಿಯೇ ನನ್ನನ್ನು ಸೃಷ್ಟಿಸಿದುದರಿಂದ ನಾನು ಮಾಡುವುದೆಲ್ಲಾ ನಿನಿಗಿಷ್ಟವಾಗಿರುವುದೆಂದು ಭಾವವು.

**ಬಹುವಿಧ ಪರಿತೋಷ ಬಾಷ್ಪಪೂರ |**
**ಸ್ಫುಟ ಪುಲಕಾಂಕಿತ ಚಾರು ಭೋಗ ಭೂಮಿಂ ||**
**ಚಿರಪದ ಫಲಕಾಂಕ್ಷಿ ಸೇವ್ಯಮಾನಾಂ |**
**ಪರಮ ಸದಾಶಿವ ಭಾವನಾಂ ಪ್ರಪದ್ಯೇ ||೬೭||**

ಅವತಾರಿಕೆ|| ಶಿವಧ್ಯಾನ ಮಹಿಮೆಯನ್ನು ಪ್ರಶಂಸಿಸುತ್ತಾರೆ.

ಟೀ|| ಬಹುವಿಧಪರಿತೋಷಬಾಷ್ಪಪೂರಸ್ಫುಟಪುಲಕಾಂಕಿತಚಾರುಭೋಗಭೂಮಿಂ, ಬಹುವಿಧ-ಬಗೆಬಗೆಯಾದ, ಪರಿತೋಷ-ಸಂತೋಷವು, ಬಾಷ್ಪಪೂರ-ಕಂಬನಿಯ ಪ್ರವಾಹವು, ಸ್ಫುಟಪುಲಕಾಂಕಿತ-ವ್ಯಕ್ತವಾದ ರೋಮಾಂಚಗಳು, ಇವುಗಳಿಂದ ತಿಳಿಸಲ್ಪಟ್ಟ, ಚಾರು-ಮನೋಜ್ಞವಾದ, ಭೋಗ-ಅನುಭವಕ್ಕೆ, ಭೂಮಿಂ-ಸ್ಥಾನವಾದಂಥಾದ್ದಾಗಿಯೂ, ಚಿರಪದ ಫಲಕಾಂಕ್ಷಿ ಸೇವ್ಯಮಾನಾಂ-ಸ್ಥಿರವಾದ ಮುಕ್ತಿಸಾಧನವೆಂಬ ಫಲವನ್ನಪೇಕ್ಷಿಸುವ ಯೋಗಿಗಳಿಂದ ಕೊಂಡಾಡಲ್ಪಟ್ಟದಾಗಿಯೂ ಇರುವ, ಪರಮ ಸದಾಶಿವ ಭಾವನಾಂ-ಉತ್ಕೃಷ್ಟನಾದ ಸದಾಶಿವನ ಧ್ಯಾನವನ್ನು, ಪ್ರಪದ್ಯೇ-ಶರಣುಹೊಂದುತ್ತೇನೆ. ಎಂದರೆ ಪರಮಶಿವಧ್ಯಾನವನ್ನು ಬಿಟ್ಟು ತನಗೆ ಬೇರೆ ಕರ್ತವ್ಯವಿಲ್ಲವೆಂದು ಭಾವವು.

**ಅಮಿತ ಮುದಮೃತಂ ಮುಹು ರ್ದುಹಂತೀಂ |**
**ವಿಮಲ ಭವತ್ಪದ ಗೋಷ್ಠಮಾವಸಂತೀಂ ||**
**ಸದಯ ಪಶುಪತೇ ಸುಪುಣ್ಯಪಾಕಾಂ |**
**ಮಮ ಪರಿಪಾಲಯ ಭಕ್ತಿಧೇನುಮೇಕಾಂ ||೬೮||**

ಅವತಾರಿಕೆ|| ಈಶ್ವರನಲ್ಲಿ ತಮಗುಂಟಾಗಿರುವ ಭಕ್ತಿಯನ್ನು ದೇವರೇ ಪರಿಪಾಲಿಸಬೇಕೆನ್ನುತ್ತಾರೆ.

ಟೀ|| ಹೇ ಸದಯ !-ಎಲೈ ದಯಾಳುವೇ !, ಹೇ ಪಶುಪತೇ !-ಎಲೈ ಪಶುಪತಿಯಾದ ಶಿವನೇ !, ಮುಹುಃ-ಬಾರಿಬಾರಿಗೂ, ಅಮಿತ ಮುದಮೃತಂ, ಅಮಿತ-ಮಿತಿಯಿಲ್ಲದ, ಮುತ್-ಸಂತೋಷವೆಂಬ, ಅಮೃತಂ-ಅಮೃತವನ್ನು (ಹಾಲನ್ನು), ದುಹಂತೀಂ-ಕರೆಯುತ್ತಲಿರುವ ವಿಮಲಭವತ್ಪದಗೋಷ್ಠಂ, ವಿಮಲ-ನಿರ್ಮಲವಾದ, ಭವತ್ಪದ-ನಿನ್ನ

ಪಾದಗಳೆಂಬ, ಗೋಷ್ಠಂ-ದನಗಳ ಕೊಟ್ಟಿಗೆಯನ್ನು, ಆವಸಂತೀಂ-ವಾಸವಾಡುವುದಾಗಿಯೂ, ಸುಪುಣ್ಯಾಪಾಕಾಂ-ಪುಣ್ಯಾಫಲರೂಪವಾಗಿಯೂ, ಇರುವ, ಏಕಾಂ-ಒಂಟಿಯಾಗಿರುವ, ಮಮ-ನನ್ನ, ಭಕ್ತಿಧೇನುಂ-ಭಕ್ತಿಯೆಂಬ ಗೋವನ್ನು, ಪರಿಪಾಲಯ-ರಕ್ಷಿಸು.

ಎಂದರೆ ಸರ್ವಫಲಪ್ರದವಾದ ನಿನ್ನ ಭಕ್ತಿಯೆಂಬ ಹಸುವನ್ನು ಪಶುಪತಿಯಾದ ನೀನೇ ಪಾಲಿಸಬೇಕೆಂಬುವುದಕ್ಕೆ, ಹಸುವಿನಿಂದ ಫಲವಂ ಪಡೆಯುವ ಅಪೇಕ್ಷೆಯಿದ್ದರೂ ಅದಂ ರಕ್ಷಿಸಲಾರದವನು ಬಹಳ ದನಗಳಂ ಕಾಪಾಡುವ ಒಬ್ಬ ಗೊಲ್ಲನ ವಶದಲ್ಲಿ ಬಿಟ್ಟು ಅವನಿಂದ ರಕ್ಷಿಸಲ್ಪಟ್ಟ ಅಂಥಾ ಹಸುವಿನ ಫಲವನ್ನು ಮಾತ್ರ ಹೇಗೆ ತಾನು ಅನುಭವಿಸುತ್ತಾನೋ ಹಾಗೆ ಶಿವಭಕ್ತಿಯನ್ನು ಕಾಪಾಡುವುದಕ್ಕೆ ತನಗೆ ಶಕ್ತಿಯಿಲ್ಲದುದರಿಂದ ಅದಕ್ಕೆ ದೇವರನ್ನೇ ಪ್ರಾರ್ಥಿಸುತ್ತಾರೆಂದು ಭಾವವು.

**ಜಡತಾ ಪಶುತಾ ಕಳಂಕಿತಾ ।**
**ಕುಟಿಲಚರತ್ವಂ ಚನಾಸ್ತಿ ಮಯಿ ದೇವ! ॥**
**ಅಸ್ತಿಯದಿ ರಾಜಮೌಳೇ ।**
**ಭವದಾಭರಣಸ್ಯ ನಾಸ್ಮಿ ಕಿಂ ಪಾತ್ರಂ ॥೬೯॥**

ಅವತಾರಿಕೆ॥ ದೋಷಯುಕ್ತನಾದ ಚಂದ್ರನನ್ನು ನೀನು ಶಿರೋಭೂಷಣವನ್ನಾಗಿ ಧರಿಸಿದವನಾದುದರಿಂದ ಅಂಥಾ ನೀನು ನನ್ನನ್ನೂ ಅವಶ್ಯ ರಕ್ಷಿಸಬೇಕೆಂದು ಹೇಳುತ್ತಾರೆ.

ಟೀ॥ ಹೇ ದೇವ !-ಎಲೈ ದೇವನೇ !, ಹೇ ರಾಜಮೌಳೇ !-ಎಲೈ ಚಂದ್ರಶೇಖರನೇ !, ಜಡತಾ_ಜಡತ್ವವು, ಪಶುತಾ-ಪಶುತ್ವವು, ಕಳಂಕಿತಾ-ಕಳಂಕತ್ವವು, ಕುಟಿಲಚರತ್ವಂ ಚ-ವಕ್ರತ್ವವೂಸಹ, ಮಯಿ-ನನ್ನಲ್ಲಿ, ನಾಸ್ತಿ-ಇಲ್ಲ, ಅಸ್ತಿಯದಿ-ಉಂಟಾದರೆ, ಭವದಾಭರಣಸ್ಯ-ನಿನ್ನ

ಪರಿಗ್ರಹಕ್ಕೆ, ಪಾತ್ರಂ-ಪಾತ್ರನಾಗಿ, ನಾಸ್ಮಿ ಕಿಂ-ಆಗಲಾರೆನೇನು ?

ಎಂದರೆ ದೋಷವುಳ್ಳ ಪದಾರ್ಥವನ್ನೇ ನೀನು ಪರಿಗ್ರಹಿಸುವನಾದುದರಿಂದ ಅಂಥಾ ನಾನೂ ನಿನ್ನ ಪರಿಗ್ರಹಕ್ಕೆ ಯೋಗ್ಯನಾಗಬಹುದೆಂದು ಭಾವವು.

**ಅರಹಸಿ ರಹಸಿ ಸ್ವತಂತ್ರಬುಧ್ಯಾ ।**
**ಪರಿವಸಿತುಂ ಸುಲಭಃ ಪ್ರಸನ್ನಮೂರ್ತಿಃ ॥**
**ಅಗಣಿತ ಫಲದಾಯಕಃ ಪ್ರಭುರ್ಮೇ ।**
**ಜಗದಧಿಕೋ ಹೃದಿ ರಾಜಶೇಖರೋಸ್ತಿ ॥೭೦॥**

ಅವತಾರಿಕೆ॥ ಸರ್ವ ಪ್ರಕಾರದಿಂದಲೂ ಸುಲಭೋಪಾಸ್ಯನಾದ ಪರಮೇಶ್ವರನು ಯಾವಾಗಲೂ ತಮ್ಮ ಹೃದಯದಲ್ಲೇ ಇರುವುದರಿಂದ ತಮಗೆ ಧೈರ್ಯವುಂಟೆಂದು ಹೇಳುತ್ತಾರೆ.

ಟೀ॥ ಅರಹಸಿ-ಬಹಿರಂಗದಲ್ಲಾದರೂ, ರಹಸಿ-ಅಂತರಂಗದಲ್ಲಾದರೂ, ಸ್ವತಂತ್ರಬುಧ್ಯಾ-ಸ್ವಾತಂತ್ರ್ಯಬುದ್ಧಿಯಿಂದ, ಪರಿವಸಿತುಂ-ಸೇವಿಸುವುದಕ್ಕೆ, ಸುಲಭಃ-ಸುಲಭವಾಗಿ ಇರುವಂಥಾ, ಪ್ರಸನ್ನಮೂರ್ತಿಃ-ಪ್ರಸನ್ನವಾದ ಮೂರ್ತಿಯುಳ್ಳಂಥಾ, ಅಗಣಿತಫಲದಾಯಕಃ, ಅಗಣಿತ-ಚಿಂತಿಸಲ್ಪಡದೆ ಇರುವಂಥಾ, ಫಲ-ಫಲವನ್ನು, ದಾಯಕಃ-ಕೊಡುವಂಥಾ, ಜಗದಧಿಕಃ-ಲೋಕಗಳಿಗೆ ಅಧಿಕನಾದ, ರಾಜಶೇಖರಃ-ಚಂದ್ರಶೇಖರನು, (ಚಕ್ರವರ್ತಿಯು) ಹೃದಿ-ಹೃದಯದಲ್ಲಿ, ಅಸ್ತಿ-ವಾಸಮಾಡುತ್ತಲಿದಾನೆ.

ಎಂದರೆ ಲೋಕದೊಳು ಒಬ್ಬ ಮನುಷ್ಯನಿಗೆ ದೊಡ್ಡ ಅರಸನು ಸ್ವಾಧೀನವಾಗಿದ್ದರೆ ಆ ಮನುಷ್ಯನ ಅಪೇಕ್ಷಿತಾರ್ಥಗಳೆಲ್ಲಾ ಹೇಗೆ ಕೈ

ಕೊಡುವುವೋ ಹಾಗೆಯೇ ಪರಮೇಶ್ವರನು ನನಗೆ ಸುಲಭನಾಗಿ ನನ್ನ ಹೃದಯದಲ್ಲೇ ಇದಾನೆಂದು ಭಾವವು.

ಆರೂಢ ಭಕ್ತಿಗುಣ ಕುಂಚಿತ ಭಾವಚಾಪ ।
ಯುಕ್ತೈಃ ಶಿವಸ್ಮರಣ ಬಾಣಗಣೈರಮೋಘೈಃ ॥
ನಿರ್ಜಿತ್ಯ ಕಿಲ್ಬಿಷ ರಿಪೂನ್ವಿಜಯೀ ಸುಧೀಂದ್ರ।
ಸ್ಸಾನಂದಮಾವಹತಿ ಸುಸ್ಥಿರರಾಜಲಕ್ಷ್ಮೀಮ್ ॥೭೧॥

ಅವತಾರಿಕೆ॥ ಶಿವಧ್ಯಾನದಿಂದ ಅಭಿಜ್ಞರು ಪಾಪಗಳಂ ನಿರ್ಮೂಲಮಾಡಿ ಶಿವಸಾರೂಪ್ಯ ಮೋಕ್ಷಲಕ್ಷ್ಮಿಯಂ ಭಜಿಸುತ್ತಾರೆಂದು ಹೇಳುತ್ತಾರೆ.

ಟೀ॥ ಸುಧೀಂದ್ರಃ ಪಂಡಿತಶ್ರೇಷ್ಠನು, ಆರೂಢಭಕ್ತಿಗುಣಕುಂಚಿತಭಾವಚಾಪಯುಕ್ತೈಃ, ಆರೂಢ-ಹತ್ತಿರುವ, ಭಕ್ತಿ-ಭಕ್ತಿಯೆಂಬ, ಗುಣ-ನಾರಿಯಿಂದ, ಕುಂಚಿತ-ಬಗ್ಗಿಸಲ್ಪಟ್ಟ, ಭಾವಚಾಪ-ಭಾವವೆಂಬ ಬಿಲ್ಲಿನೊಂದಿಗೆ, ಯುಕ್ತೈಃ-ಸಂಧಿಸಲ್ಪಟ್ಟಿರುವ, ಅಮೋಘೈಃ-ವ್ಯರ್ಥಗಳಲ್ಲದೆ ಇರುವ, ಶಿವಸ್ಮರಣಬಾಣಗಣೈಃ-ಶಿವಧ್ಯಾನವೆಂಬ ಅಂಬುಗಳಿಂದ, ಕಿಲ್ಬಿಷರಿಪೂನ್-ಪಾಪಗಳೆಂಬ ಶತ್ರುಗಳನ್ನು, ನಿರ್ಜಿತ್ಯ-ಜಯಿಸಿ ವಿಜಯೀ-ಜಯವುಳ್ಳವನಾಗಿ, ಸಾನಂದಂ-ಆನಂದವುಳ್ಳವನಾಗಿ, ಸುಸ್ಥಿರರಾಜಲಕ್ಷ್ಮೀಂ-ಸ್ಥಿರವಾದ ಮೋಕ್ಷರಾಜ್ಯ ಲಕ್ಷ್ಮಿಯನ್ನು, ಆವಹತಿ-ವಹಿಸುತ್ತಲಿದಾನೆ. ಎಂದರೆ ಶಿವಧ್ಯಾನಪರನು ಪಾಪಜಯಪೂರ್ವಕವಾಗಿ ಮೋಕ್ಷಸಾಮ್ರಾಜ್ಯ ಲಕ್ಷ್ಮಿಯನ್ನೈದುತ್ತಾನೆಂದು ಭಾವವು.

ಧ್ಯಾನಾಂಜನೇನ ಸಮವೇಕ್ಷ್ಯ ತಮಃಪ್ರದೇಶಂ ।
ಭಿತ್ವಾ ಮಹಾಬಲಿಭಿ ರೀಶ್ವರನಾಮಮಂತ್ರೈಃ ॥
ದಿವ್ಯಾಶ್ರಿತಂ ಭುಜಗಭೂಷಣ ಮುದ್ವಹಂತಿ ।
ಯೇ ಪಾದಪದ್ಮಮಿಹ ತೇ ಶಿವ! ತೇ ಕೃತಾರ್ಥಾಃ ॥೭೨॥

ಅವತಾರಿಕೆ|| ಹೇ ಶಿವ !-ಎಲೈ ಶಿವನೇ !, ಧ್ಯಾನಾಂಜನೇನ-ಧ್ಯಾನವೆಂಬ ನಿಧಿಯ ಅಂಜನದಿಂದ, ಸಮವೇಕ್ಷ್ಯ-ನಿನ್ನ ಪಾದಾಬ್ಜವೆಂಬ ವಸ್ತುವನ್ನು ನೋಡಿ, ಮಹಾಬಲಿಭಿಃ-ದೊಡ್ಡ ಪೂಜೋಪಹಾರ ಬಲಿಗಳಿಂದಲೂ, ಶಿವನಾಮ ಮಂತ್ರಗಳಿಂದಲೂ, ತಮಃಪ್ರದೇಶಂ, ತಮಃ-ಅವಿದ್ಯೆಯೆಂಬ, ಪ್ರದೇಶಂ-ಸ್ಥಾನವನ್ನು, ಭಿತ್ವಾ-ಭೇದಿಸಿ, ಎಂದರೆ ಅಗೆದು, ದಿವ್ಯಾಶ್ರಿತಂ-ದೇವತೆಗಳಿಂದ ಆಶ್ರಯಿಸಲ್ಪಟ್ಟುದಾಗಿಯೂ, ಭುಜಗಭೂಷಣಂ-ಸರ್ಪಭೂಷಿತವಾಗಿಯೂ, ಸರ್ಪದಿಂದ ಕಾಯಲ್ಪಟ್ಟೂ ಇರುವ, ತೇ-ನಿನ್ನ, ಪಾದಪದ್ಮಂ-ಪಾದಾಬ್ಜವನ್ನು, ಯೇ-ಯಾರು, ಉದ್ವಹಂತಿ-ವಹಿಸುತ್ತಾರೋ, ತೇ-ಅವರು, ಇಹ-ಈ ಲೋಕದೊಳು, ಕೃತಾರ್ಥಾಃ-ಜನ್ಮಸಾರ್ಥಕ್ಯವುಳ್ಳವರು.

ಎಂದರೆ ದಿವ್ಯಾಂಜನದಿಂದ ನಿಧಿಯಿರುವ ಸ್ಥಲವನ್ನು ನೋಡಿ ಅದಂ ಕಾದಿರುವ ದೇವತೆಗಳನ್ನು ಬಲಿಮಂತ್ರ ಜಪಾದಿಗಳಿಂದ ಸ್ವಾಧೀನಮಾಡಿಕೊಂಡು, ಸ್ಥಲವನ್ನು ಅಗೆದು ನಿಧಿಯನ್ನು ತೆಗೆದುಕೊಂಡ ಹಾಗೆ, ಶಿವಭಕ್ತರು ಶಿವಪಾದಾರವಿಂದವಂ ಹೊಂದುತ್ತಾರೆಂದು ಭಾವವು.

ಭೂದಾರತಾಮುದವಹದ್ಯದಪೇಕ್ಷಯಾ ಶ್ರೀ ।
ಭೂದಾರ ಏವ ಕಿಮತಸ್ಸುಮತೇ! ಲಭಸ್ವ ॥
ಕೇದಾರಮಾಕಲಿತಮುಕ್ತಿಮಹೌಷಧೀನಾಂ ।
ಪಾದಾರವಿಂದಭಜನಂ ಪರಮೇಶ್ವರಸ್ಯ ॥೭೩॥

ಅವತಾರಿಕೆ || ಸರ್ವರಿಗೂ ಶಿವಪಾದಭಜನ ಅವಶ್ಯಕಾರ್ಯವೆಂದು ಹೇಳುತ್ತಾರೆ.

ಟೀ|| ಹೇ ಸುಮತೇ!-ಎಲೈ ಶುಭಬುದ್ಧಿಯುಳ್ಳವನೇ!, ಯದಪೇ

ಕ್ಷಯಾ-ಯಾವುದರ ಅಪೇಕ್ಷೆಯಿಂದ, ಶ್ರೀಭೂದಾರಃ-ಲಕ್ಷ್ಮೀಭೂಮಿ ಗಳಿಗೆ ಪತಿಯಾದ ಮಹಾವಿಷ್ಣುವು, ಭೂದಾರತಾಂ-ವರಾಹತ್ವವನ್ನು, ಉದವಹತ್-ವಹಿಸಿದನೋ, ಆಕಲಿತಮುಕ್ತಿಮಹೌಷಧೀನಾಂ,ಆಕಲಿತ-ಅಪೇಕ್ಷಿಸಲ್ಪಟ್ಟ, ಮುಕ್ತಿ-ಮುಕ್ತಿಗಳೆಂಬ, ಮಹೌಷಧೀನಾಂ-ಔಷಧಿ ಗಳಿಗೆ, (ಮದ್ದಿನ ಸೊಪ್ಪುಗಳಿಗೆ) ಕೇದಾರಂ-ಗದ್ದೆಯಾಗಿ ಇರುವಂಥಾ ಪರಮೇಶ್ವರಸ್ಯ-ಈಶ್ವರನ, ಪಾದಾರವಿಂದಭಜನಂ-ಪಾದಪದ್ಮ ಪ್ರಾಪ್ತಿ ಯನ್ನು, ಲಭಸ್ವ-ಹೊಂದು. ಎಂದರೆ ಶಿವಪಾದಭಜನವನ್ನು ಮಾಡ ಬೇಕೆಂದು ಭಾವವು.

ಆಶಾಪಾಶಕ್ಲೇಶದುರ್ವಾಸನಾದೇಃ ।
ಭೇದೋದ್ಯುಕ್ತೈರ್ದಿವ್ಯಗಂಧೈರಮಂದೈಃ ॥
ಆಶಾಶಾಟೀಕಸ್ಯ ಪಾದಾರವಿಂದಂ ।
ಚೇತಃಪೇಟೀಂ ವಾಸಿತಾಂ ಮೇ ತನೋತು ॥೭೪॥

ಅವತಾರಿಕೆ॥ ಸರ್ವಕಾಲವೂ ಪರಮೇಶ್ವರನ ಪಾದಾರವಿಂದವು ತಮ್ಮ ಹೃದಯದೊಳಿರಬೇಕೆನ್ನುತ್ತಾರೆ.

ಟೀ॥ ಆಶಾಪಾಶಕ್ಲೇಶದುರ್ವಾಸನಾದೇಃ, ಆಶಾಪಾಶ-ಆಶೆಯೆಂಬ ಪಾಶದಿಂದುಂಟಾದ ಕ್ಲೇಶ-ದುಃಖವು, ದುರ್ವಾಸನಾ-ಕೆಟ್ಟ ಅಭ್ಯಾಸ ವು, ಇದು ಮೊದಲಾದುವುಗಳ, ಭೇದೋದ್ಯುಕ್ತೈಃ-ಹೋಗಲಾಡಿಸು ವುದರಲ್ಲಿ ಪ್ರವರ್ತಿಸುವಂಥಾ, ಅಮಂದೈಃ-ಅಧಿಕವಾದಂಥಾ, ದಿವ್ಯ ಗಂಧೈಃ-ದಿವ್ಯ ಪರಿಮಳಗಳಿಂದ, ಆಶಾಶಾಟೀಕಸ್ಯ, ಆಶಾ-ದಿಕ್ಕುಗಳ ನ್ನೇ ಶಾಟೀಕಸ್ಯ-ವಸ್ತ್ರಗಳನ್ನಾಗಿ ಉಳ್ಳಂಥಾ, ದಿಗಂಬರನ, ಪಾದಾರ ವಿಂದಂ-ಚರಣಾಂಬುಜವು, ಮೇ-ನನ್ನ, ಚೇತಃಪೇಟೀಂ-ಮನಸ್ಸೆಂಬ ಪೆಟ್ಟಿಗೆಯನ್ನು, ವಾಸಿತಾಂ-ಪರಿಮಳ ಸಹಿತವನ್ನಾಗಿ, ತನೋತು-

ಮಾಡಬೇಕು. ಎಂದರೆ ಸದಾಶಿವನ ಪಾದಾರವಿಂದವು ತನ್ನ ಹೃದಯದಲ್ಲೇ ಇರಬೇಕೆಂದು ಭಾವವು.

**ಕಲ್ಯಾಣಿನಂ ಸರಸಚಿತ್ರಗತಿಂ ಸವೇಗಂ ।**
**ಸರ್ವೇಂಗಿತಜ್ಞಮನಘಂ ಧ್ರುವಲಕ್ಷಣಾಢ್ಯಂ ॥**
**ಚೇತಸ್ತುರಂಗಮಧಿರುಹ್ಯ ಚರ ಸ್ಮರಾರೇ! ।**
**ನೇತಸ್ಸಮಸ್ತಜಗತಾಂ ವೃಷಭಾಧಿರೂಢ! ॥೭೫॥**

ಅವತಾರಿಕೆ॥ ಇದನ್ನೇ ಬೇರೊಂದು ಬಗೆಯಾಗಿ ಹೇಳುತ್ತಾರೆ.

ಟೀ॥ ಹೇ ಸ್ಮರಾರೇ !-ಎಲೈ ಮನ್ಮಥನನ್ನು ಜಯಿಸಿದವನೇ !, ಸಮಸ್ತ ಜಗತಾಂ-ಸರ್ವ ಲೋಕಗಳಿಗೂ, ಹೇ ನೇತಃ !-ಎಲೈ ಅಧಿಪತಿಯೇ !, ಹೇ ವೃಷಭಾಧಿರೂಢ !-ಎಲೈ ವೃಷಭವಾಹನನೇ !, ಕಲ್ಯಾಣಿನಂ-ಶುಭಕರವಾದ, ಪಂಚಕಲ್ಯಾಣಿಯಾದ, ಸರಸಚಿತ್ರಗತಿಂ, ಸರಸ-ಅನುರಾಗವುಳ್ಳುದಾಗಿಯೂ, ಚಿತ್ರ-ವಿಚಿತ್ರವಾಗಿಯೂ ಇರುವ, ಗತಿಂ-ಪ್ರವೃತ್ತಿಯುಳ್ಳಂಥಾ, ನಾನಾವಿಧಧಾರಾಗತಿಗಳುಳ್ಳಂಥಾ, ಸವೇಗಂ-ವೇಗವುಳ್ಳಂಥಾ, ಸರ್ವೇಂಗಿತಜ್ಞಂ-ಎಲ್ಲ ಇಂಗಿತಗಳನ್ನು ತಿಳಿದಿರುವಂಥಾ, ಅನಘಂ-ದೋಷರಹಿತವಾದ, ಕೆಟ್ಟಸುಳಿ ಮುಂತಾದ ದೋಷವಿಲ್ಲದಂಥಾ, ಧ್ರುವಲಕ್ಷಣಾಢ್ಯಂ-ಸ್ಥಿರವಾದ ಶುಭಲಕ್ಷಣವುಳ್ಳಂಥಾ ಧ್ರುವಸುಳಿಗಳುಳ್ಳಂಥಾ, ಚೇತಸ್ತುರಂಗಂ-ಮನಸ್ಸೆಂಬ ಕುದುರೆಯನ್ನು, ಅಧಿರುಹ್ಯ-ಹತ್ತಿ, ಚರ-ಸಂಚರಿಸು. ಎಂದರೆ ನನ್ನ ಹೃದಯವು ಉತ್ತಮಾಶ್ವದಂತೆ ನಿನ್ನ ಸವಾರಿಗೆ ಯೋಗ್ಯವಾದುದೆಂದು ಭಾವವು.

**ಭಕ್ತಿರ್ಮಹೇಶ ಪದಪುಷ್ಕರಮಾವಸಂತೀ ।**
**ಕಾದಂಬಿನೀವ ಕುರುತೇ ಪರಿತೋಷವರ್ಷಂ ॥**

**ಸಂಪೂರಿತೋಭವತಿ ಯಸ್ಯ ಮನಸ್ತಟಾಕ |**
**ಸ್ತಜ್ಜನ್ಮಸಸ್ಯಮಖಿಲಂ ಸಫಲಂ ಚ ನಾನ್ಯತ್ ||೭೯||**

ಅವತಾರಿಕೆ|| ಮಹೇಶ್ವರಪದಭಕ್ತಿಯು ತಮ್ಮ ಹೃದಯದಲ್ಲಿ ಸದಾ ತುಂಬಿರಬೇಕೆಂದು ಹೇಳುತ್ತಾರೆ.

ಟೀ|| ಹೇ ಮಹೇಶ !-ಎಲೈ ಪರಮೇಶ್ವರನೇ!, ಯಸ್ಯ-ಯಾವ ಮಳೆಯು ಬೀಳುವಿಕೆಯಿಂದ, ಮನಸ್ತಟಾಕಃ-ಮನಸ್ಸೆಂಬ ಕೊಳವು, ಸಂಪೂರಿತಃ-ತುಂಬಿಸಲ್ಪಟ್ಟುದಾಗಿ, ಭವತಿ-ಆಗುತ್ತಲಿದೆಯೋ,ಅಖಿಲಂ-ಸಮಸ್ತವಾದ, ತಜ್ಜನ್ಮ-ಅದರಿಂದುಂಟಾದ, ಸಸ್ಯಂ-ಪೈರು, ಸಫಲಂ-ಫಲವುಳ್ಳುದಾಗಿ, ಸ್ಯಾತ್-ಆದೀತೋ, ಅನ್ಯತ್-ಇತರ (ವಿಪರೀತ)ವಾದುದು, ನ-ಆಗುವುದಿಲ್ಲವೋ, ಅಂಥಾ ಪದಪುಷ್ಕರಂ-ನಿನ್ನ ಚರಣಗಳೆಂಬ ಆಕಾಶವನ್ನು, ಆವಸಂತೀ-ವಾಸಮಾಡುವ, ಭಕ್ತಿಃ- ಭಕ್ತಿಯು, ಕಾದಂಬಿನೀವ-ಮೇಘದೋಪಾದಿ, ಪರಿತೋಷವರ್ಷಂ-ಸಂತೋಷ ಮಳೆಯನ್ನು, ಕುರುತೇ-ಸುರಿಸುತ್ತದೆ. ಎಂದರೆ ನಿನ್ನ ಪಾದಾಬ್ಜಭಕ್ತಿಯಿಂದ ನನ್ನ ಮನಸ್ಸು ಸಂತೋಷಭರಿತವಾಗಿ ಇರುವುದರಿಂದ ನನಗೆ ಸರ್ವ ಫಲವೂ ಉಂಟಾಗುತ್ತದೆಂದು ಭಾವವು.

**ಬುದ್ಧಿಸ್ಥಿರಾಭವಿತುಮೀಶ್ವರ ಪಾದಪದ್ಮ |**
**ಸಕ್ತಾ ವಧೂರ್ವಿರಹಿಣೀವ ಸದಾ ಸ್ಮರಂತೀ ||**
**ಸದ್ಭಾವನಾಸ್ಮರಣದರ್ಶನಕೀರ್ತನಾದಿ |**
**ಸಮ್ಮೋಹಿತೇವ ಶಿವಮಂತ್ರಜಪೇನ ವಿಂತೇ ||೭೭||**

ಅವತಾರಿಕೆ|| ಮತ್ತೂ ಶಿವಭಕ್ತಿಯನ್ನೇ ಪ್ರಶಂಸಿಸುತ್ತಾರೆ.

ಟೀ|| ಹೇ ಈಶ್ವರ !-ಎಲೈ ಈಶ್ವರನೇ !, ವಿರಹಿಣೀ-ಪ್ರಿಯನನ್ನಗಲಿದ, ವಧೂರಿವ-ಸ್ತ್ರೀಯಂತೆ, ಬುದ್ಧಿಃ-ಬುದ್ಧಿಯು, ಪಾದಪದ್ಮ-

ಸಕ್ತಾ-ಚರಣಾಂಬುಜದಲ್ಲಿ ಆಸಕ್ತಿಯುಳ್ಳದಾಗಿ, ಸದಾ-ಯಾವಾಗಲೂ, ಸ್ಮರಂತೀ-(ಅದನ್ನೇ) ಸ್ಮರಿಸುವಂಥಾದ್ದಾಗಿಯೂ, ಶಿವಮಂತ್ರಜಪೇನ-ಶಿವ ಎಂಬ ಮಂತ್ರ ಜಪದಿಂದ, ಸದ್ಭಾವನಾಸ್ಮರಣದರ್ಶನಕೀರ್ತನಾದಿ ಸಮ್ಮೋಹಿತೇವ, ಸತ್-ಯೋಗ್ಯವಾದ, ಭಾವನಾ-ಧ್ಯಾನವು, ಸ್ಮರಣ-ಸ್ಮರಿಸುವಿಕೆಯು, ದರ್ಶನ-ನೋಟವು, ಕೀರ್ತನ-ನಾಮಕೀರ್ತನವು, ಇವುಗಳಿಂದ, ಸಮ್ಮೋಹಿತೇವ ಮೋಹವಂ ಪಡದೋಪಾದಿಯಲ್ಲಿ, ಸ್ಥಿರಾ-ಸ್ಥಿರತ್ವವುಳ್ಳದಾಗಿ, ಭವಿತುಂ-ಆಗುವುದಕ್ಕೆ, ವಿಮೃಶತೇ-ವಿಚಾರಿಸುತ್ತಲಿದೆ. ಎಂದರೆ ಸ್ಥಿರವಾಗಿ ನಿನ್ನ ಭಕ್ತಿಯಂ ಪಡೆಯುವುದಕ್ಕಾಗಿ ಯಾವಾಗಲೂ ವಿಚಾರಿಸುತ್ತಲಿರುವ ನನ್ನ ಬುದ್ಧಿಯನ್ನು ನೀನೇ ಉದ್ಧರಿಸಬೇಕೆಂದು ಭಾವವು.

ಸದುಪಚಾರವಿಧಿಷ್ವನುಬೋಧಿತಾಂ ।
ಸವಿನಯಾಂ ಸುಹೃದಂ ಸಮುಪಾಶ್ರಿತಾಂ ॥
ಮಮ ಸಮುದ್ಧರ ಬುದ್ಧಿಮಿಮಾಂ ಪ್ರಭೋ ।
ವರಗುಣೇನ ನವೋಢವಧೂಮಿವ ॥೭೯॥

ಅವತಾರಿಕೆ॥ ತಮ್ಮ ಬುದ್ಧಿಯನ್ನು ಪರಮೇಶ್ವರನೇ ಅನುಗ್ರಹಿಸಬೇಕೆನ್ನುತ್ತಾರೆ.

ಟೀ॥ ಹೇ ಪ್ರಭೋ !-ಎಲೈ ಸರ್ವಾರ್ಥಘಟನಸಮರ್ಥನೇ !, ಸದುಪಚಾರವಿಧಿಷು-ಯೋಗ್ಯವಾದ ಉಪಚಾರವಿಧಾನಗಳಲ್ಲಿ, ಅನುಬೋಧಿತಾಂ-ಸರಿಯಾಗಿ ಬೋಧಿಸಲ್ಪಟ್ಟುದಾಗಿಯೂ, ಸವಿನಯಾಂ-ವಿನಯವುಳ್ಳುದಾಗಿಯೂ, ಸುಹೃದಂ-ಒಳ್ಳೆಯ ಮನಸ್ಸುಳ್ಳವನನ್ನು, ಸಮುಪಾಶ್ರಿತಾಂ-ಹೊಂದಿದುದಾಗಿಯೂ ಇರುವ, ಮಮ-ನನ್ನ, ಇಮಾಂ-ಇಂಥಾ, ನವೋಢವಧೂಮಿವ-ಮೈನೆರೆದ ಹುಡುಗಿಯಂತೆ

ಮುಗ್ಧೆಯಾಗಿ ಇರುವ, ಬುದ್ಧಿಂ-ಬುದ್ಧಿಯನ್ನು, ವರಗುಣೇನ-ಶ್ರೇಷ್ಠ ವಾದ ಗುಣೋಪದೇಶದಿಂದ, ಸಮುದ್ಧರ-ಅನುಗ್ರಹಿಸು. ಎಂದರೆ ವಿವೇಕವಿಲ್ಲದ ನನ್ನ ಬುದ್ಧಿಗೆ ನೀನೇ ವಿವೇಕವನ್ನು ಕೊಡಬೇಕೆಂದು ಭಾವವು.

ನಿತ್ಯಂ ಯೋಗಿಮನಸ್ಸರೋಜದಳಸಂಚಾರಕ್ಷಮಸ್ತ್ವತ್ಕ್ರಮ |
ಶ್ಶಂಭೋ ತೇನ ಕಥಂ ಕಠೋರ ಯಮರಾಡ್ವಕ್ಷಃ ಕವಾಟಕ್ಷತಿಃ ||
ಅತ್ಯಂತಂ ಮೃದುಲಂ ತ್ವದಂಘ್ರಿಯುಗಳಂ ಹಾ ಮೇ ಮನಶ್ಚಿಂತಯ |
ತ್ಯೇತಲ್ಲೋಚನಗೋಚರಂ ಕುರು ವಿಭೋ ಹಸ್ತೇನ ಸಂವಾಹಯೇ ||೭೯||

ಅವತಾರಿಕೆ|| ನಿನ್ನ ಪಾದಪದ್ಮಗಳನ್ನು ಯಾವಾಗ ಕೈಯಿಂದ ಒತ್ತುವೆನೆನ್ನುತ್ತಾರೆ.

ಟೀ|| ಹೇ ಶಂಭೋ !-ಎಲೈ ಶುಭಕರನೇ !, ಹೇ ವಿಭೋ !-ಎಲೈ ವ್ಯಾಪಕನೇ !, ನಿತ್ಯಂ-ಯಾವಾಗಲೂ, ಯೋಗಿಮನಸ್ಸರೋಜ ದಳಸಂಚಾರಕ್ಷಮಃ, ಯೋಗಿ-ಯೋಗೀಶ್ವರರ, ಮನಸ್ಸರೋಜ-ಹೃದಯಕಮಲಗಳ, ದಳ-ದಳದಲ್ಲಿ, ಸಂಚಾರಕ್ಷಮಃ-ಸಂಚಾರಯೋಗ್ಯ ವಾದ, ತ್ವತ್ಕ್ರಮಃ-ನಿನ್ನ ಪಾದನ್ಯಾಸವು; ತ್ವದಂಘ್ರಿಯುಗಳಂ-ನಿನ್ನ ಪಾದದ್ವಯವು, ಅತ್ಯಂತಂ-ಬಹಳವಾಗಿ, ಮೃದುಳಂ-ಮೃದುವಾದುದು; ತೇನ-ಅಂಥಾದ್ದರಿಂದ, ಕಠೋರಯಮರಾಡ್ವಕ್ಷಃ ಕವಾಟಕ್ಷತಿಃ-ಕಠಿನವಾದ ಯಮನ ವಕ್ಷಸ್ಥಲದ, ಕ್ಷತಿಃ-ಒಡೆಯುವಣವು, ಕಥಂ-ಹೇಗೆ ಆಯಿತು ?, ಹಾ-ಅಯ್ಯೋ ಯೆಂಬದಾಗಿ, ಮೇ-ನನ್ನ, ಮನಃ-ಮನಸ್ಸು, ಚಿಂತಯತಿ-ಆಲೋಚಿಸುತ್ತದೆ, ಏತತ್-ಈ ಪಾದಯುಗಳವನ್ನು, ಲೋಚನಗೋಚರಂ, ಲೋಚನ-ಕಣ್ಣಳಿಗೆ, ಗೋಚರಂ-ಪ್ರತ್ಯಕ್ಷವನ್ನಾಗಿ, ಕುರು-ಮಾಡು; ಹಸ್ತೇನ-ಕೈಯಿಂದ, ಸಂವಾಹ

ಯೇ-ಬಿತ್ತುತ್ತೇನೆ. ಎಂದರೆ ಭಕ್ತರ ರಕ್ಷಣೆಗೋಸ್ಕರ ಬಹಳ ನೊಂದಿರುವ ನಿನ್ನ ಪಾದಾರವಿಂದವನ್ನು ನಾನು ಕೈಯಿಂದ ಹಿಡಿಯುವಂತೆ ನನಗೆ ಪ್ರತ್ಯಕ್ಷನಾಗಬೇಕೆಂದು ಭಾವವು.

ಏಷ್ಯತ್ಯೇಷ ಜನಿಂ ಮನೋಽಸ್ಯ ಕಠಿನಂ ತಸ್ಮಿನ್ನಟಾನೀತಿ |
ಮದ್ರಕ್ಷಾಯೈ ಗಿರಿಸೀಮ್ನಿ ಕೋಮಲಪದನ್ಯಾಸಃ ಪುರಾಭ್ಯಾಸಿತಃ ||
ನೋಚೇದ್ದಿವ್ಯಗೃಹಾಂತರೇಷು ಸುಮನಸ್ತಲ್ಪೇಷು ವೇದ್ಯಾದಿಷು |
ಪ್ರಾಯಸ್ಸತ್ಸು ಶಿಲಾತಲೇಷು ನಟನಂ ಶಂಭೋ! ಕಿಮರ್ಥಂ ತವ ||೮೯ ||

ಅವತಾರಿಕೆ|| ಬೇರೊಂದು ಬಗೆಯಾಗಿ ದೇವರ ಮೃದುವಾದ ಪಾದಾಂಬುಜವನ್ನು ಸ್ತುತಿಸುತ್ತಾರೆ.

ಟೀ|| ಹೇ ಶಂಭೊ !-ಹೇ ಶುಭಕರನೇ !, ಏಷಃ-ಈ ಜೀವನು, ಜನಿಂ-ಜನ್ಮವನ್ನು, ಏಷ್ಯತಿ-ಹೊಂದಲುಳ್ಳವನು; ಅಸ್ಯ-ಇವನ, ಮನಃ-ಹೃದಯವು, ಕಠಿನಂ-ಕಠಿನವು, ತಸ್ಮಿನ್-ಅದರಲ್ಲಿ, ಅಟಾನಿ-ನಾನು ತಿರುಗಲುಳ್ಳವನು, ಇತಿ-ಯೆಂಬುದಾಗಿ ಮುಂದು ಯೋಚಿಸಿ, ಮದ್ರಕ್ಷಾಯೈ-ನನ್ನ ರಕ್ಷಣಕ್ಕೋಸ್ಕರ, ಗಿರಿಸೀಮ್ನಿ-ಕೈಲಾಸ ಮಧ್ಯಪ್ರದೇಶದಲ್ಲಿ, ಕೋಮಲಪದನ್ಯಾಸಃ-ಮೃದುವಾದ ಪಾದನ್ಯಾಸವು, ಪುರಾ-ನಾನು ಹುಟ್ಟುವುದಕ್ಕೆ ಮುಂಚಿತವಾಗಿ, ಅಭ್ಯಾಸಿತಃ-ಕಲಿಯಲ್ಪಟ್ಟಿತು; ನೋಚೇತ್-ಹಾಗಲ್ಲದಿದ್ದರೆ, ದಿವ್ಯಗೃಹಾಂತರೇಷು, ದಿವ್ಯ-ರಮಣೀಯವಾದ, ಗೃಹಾಂತರೇಷು-ಗೃಹದ ಮಧ್ಯ ಪ್ರದೇಶಗಳಲ್ಲಿ, ಸುಮನಸ್ತಲ್ಪೇಷು-ಪುಷ್ಪಶಯನಗಳು, ವೇದ್ಯಾದಿಷು-ರತ್ನಜಗತಿ ಮೊದಲಾದವುಗಳು, ಪ್ರಾಯಃ-ಬಹುಶಃ, ಸತ್ಸು-ಇರುವಲ್ಲಿ, ಶಿಲಾತಲೇಷು-ಕಲ್ಲುಗಳ ಪ್ರದೇಶಗಳಲ್ಲಿ, ತವ-ನಿನ್ನ, ನಟನಂ-ತಾಂಡವವು, ಕಿಮರ್ಥಂ-ಏತಕ್ಕೆ ?. ಎಂದರೆ ಕಠಿನವಾದ ನನ್ನ ಮನಸ್ಸಿನಲ್ಲಿ ನೆಲೆಗೊಳ್ಳುವುದ

ಕ್ಶೋಽಸ್ಕರವೇ ಪರ್ವತದಲ್ಲಿ ವಾಸಮಾಡುತ್ತೀಯೆ ಎಂದು ಭಾವವು.

**ಕಂಚಿತ್ಕಾಲಮುಮಾಮಹೇಶ ! ಭವತಃ ಪಾದಾರವಿಂದಾರ್ಚನೈಃ |**
**ಕಂಚಿಧ್ಯಾನಸಮಾಧಿಭಿಶ್ಚ ನತಿಭಿಃಕಂಚಿತ್ಕಥಾಕರ್ಣನೈಃ ||**
**ಕಂಚಿತ್ಕಂಚಿದವೇಕ್ಷಣೈಶ್ಚನುತಿಭಿಃ ಕಂಚಿದ್ದಶಾಮೀದೃಶೀಂ |**
**ಯಃಪ್ರಾಪ್ನೋತಿ ಮುದಾ ತ್ವದರ್ಪಿತಮನಾ ಜೀವನ್ ಸಮುಕ್ತಃ ಖಲು ||೮೧||**

ಅವತಾರಿಕೆ|| ಮನುಷ್ಯನಿಗೆ ತನ್ನ ಆಯುಷ್ಕಾಲದಲ್ಲಿ ಅವಶ್ಯಕರ್ತವ್ಯವಾದುದನ್ನು ಹೇಳುತ್ತಾರೆ.

ಟೀ|| ಹೇ ಉಮಾಮಹೇಶ!-ಎಲೈ ಪಾರ್ವತೀಸಮೇತನಾದ ಪರಮೇಶ್ವರನೇ !, ಕಂಚಿತ್ಕಾಲಂ-ಒಂದುವೇಳೆ, ಭವತಃ-ನಿನ್ನ, ಪಾದಾರವಿಂದಾರ್ಚನೈಃ-ಪಾದಪದ್ಮಗಳ ಪೂಜೆಗಳಿಂದಲೂ, ಕಂಚಿತ್-ಒಂದು ವೇಳೆ, ಧ್ಯಾನಸಮಾಧಿಭಿಃ-ಧ್ಯಾನರೂಪವಾದ ಸಮಾಧಿ ನಿಯಮಗಳಿಂದಲೂ, ಕಂಚಿತ್-ಒಂದು ವೇಳೆ, ನತಿಭಿಃ-ನಮಸ್ಕಾರಗಳಿಂದಲೂ, ಕಂಚಿತ್-ಒಂದು ಕಾಲ, ಅವೇಕ್ಷಣೈಃ-ಮೂರ್ತಿದರ್ಶನಗಳಿಂದಲೂ, ಕಂಚಿತ್-ಒಂದು ಕಾಲ, ನುತಿಭಿಃ-ಸ್ತೋತ್ರಗಳಿಂದಲೂ, ಯಃ-ಯಾವನು, ತ್ವದರ್ಪಿತಮನಾಃ-ನಿನ್ನಲ್ಲಿ ಅರ್ಪಿತವಾದ ಮನಸ್ಸುಳ್ಳವನಾಗಿ, ಮುದಾ-ಸಂತೋಷದಿಂದ, ಈದೃಶೀಂ-ಇಂಥಾ, ದಶಾಂ-ದಶೆಯನ್ನು, ಪ್ರಾಪ್ನೋತಿ-ಹೊಂದುತ್ತಾನೋ, ಸಃ-ಅವನು, ಜೀವನ್-ಬದುಕಿರುವಾಗಲೇ, ಮುಕ್ತಃಖಲು-ಮುಕ್ತಿಯನ್ನೈದಿದವನಲ್ಲವೆ ? ಎಂದರೆ ಸರ್ವಕಾಲವೂ ಶಿವಧ್ಯಾನದಲ್ಲಿ ಇರುವವನೇ ಜೀವನ್ಮುಕ್ತನೆಂದು ಭಾವವು.

**ಬಾಣತ್ವಂ ವೃಷಭತ್ವಮರ್ಧವಪುಷಾ ಭಾರ್ಯಾತ್ವಮಾರ್ಯಾಪತೇ |**
**ಘೋಣಿತ್ವಂ ಸಖಿತಾ ಮೃದಂಗವಹತಾಂ ಚೇತ್ಯಾದಿರೂಪಂ ದಧೌ ||**
**ತ್ವತ್ಪಾದೇ ನಯನಾರ್ಪಣಂ ಚ ಕೃತವಾನ್ ತ್ವದ್ದೇಹಭಾಗೋ ಹರಿಃ |**
**ಪೂಜ್ಯಾತ್ಪೂಜ್ಯತರಸ್ಸಏವ ಹಿ ನಚೇತ್ಕೋವಾ ತದನ್ಯೋಽಧಿಕಃ ||೮೨||**

ಅವತಾರಿಕೆ|| ಶಿವನೇ ಸರ್ವೋತ್ತಮನೆಂದು ಹೇಳುತ್ತಾರೆ.

ಟೀ|| ಹೇ ಆರ್ಯಾಪತೇ !-ಎಲೈ ಪಾರ್ವತೀಪತಿಯೇ !, ಹರಿಃ-ವಿಷ್ಣುವು, ಬಾಣತ್ವಂ-ಬಾಣವಾಗಿರುವಿಕೆಯನ್ನು, ವೃಷಭತ್ವಂ-ವೃಷಭವಾಗುವಣವನ್ನು, ಅರ್ಧವಪುಷಾ-ಅರ್ಧದೇಹದಿಂದ, ಭಾರ್ಯಾತ್ವಂ-ಭಾರ್ಯೆಯಾಗಿರುವಣವನ್ನು, ಘೋಣಿತ್ವಂ-ವರಾಹವಾಗುವಣವನ್ನು, ಸಖಿತಾ-ಸ್ನೇಹಿತನಾಗಿರುವಣವನ್ನು, ಮೃದಂಗವಹತಾಂ-ಮೃದಂಗವಂ ವಹಿಸುವಿಕೆಯನ್ನು, ಇತ್ಯಾದಿರೂಪಂ-ಇಂಥಾ ರೂಪಗಳನ್ನು, ದಧೌ-ಧರಿಸಿದನು, ಮತ್ತು ತ್ವದ್ದೇಹಭಾಗಃ-ನಿನ್ನ ದೇಹದಲ್ಲಿ ಒಂದು ಭಾಗವಾಗಿ, ತ್ವತ್ಪಾದೇ-ನಿನ್ನ ಪಾದದಲ್ಲಿ, ನಯನಾರ್ಚನಂ-ಕಣ್ಣಿನಿಂದ ಅರ್ಚನೆಯನ್ನು, ಕೃತವಾನ್-ಮಾಡಿದನು, ಆದುದರಿಂದ ಪೂಜ್ಯಾತ್-ಪೂಜ್ಯನಿಗಿಂತ, ಸ ಏವ-ಅವನೇ, ಪೂಜ್ಯತರಃ-ವಿಶೇಷ ಪೂಜ್ಯನು, ನಚೇತ್-ಹಾಗೆ ಮಾಡದಿದ್ದರೆ, ತದನ್ಯಃ-ಅವನಿಗಿಂತ ಬೇರೊಬ್ಬನು, ಕೋವಾಧಿಕಃ-ಯಾವನು ಶ್ರೇಷ್ಠನು? ಎಂದರೆ ದೇವತೆಗಳಲ್ಲಿ ಬ್ರಹ್ಮನು ಶ್ರೇಷ್ಠನು, ಅವನಿಗಿಂತ ವಿಷ್ಣುವು ಪೂಜ್ಯನು, ಅವನಿಗಿಂತ ಮಹೇಶ್ವರನು ಪೂಜ್ಯನೆಂದು ಭಾವವು.

**ಜನನ ಮೃತಿ ಯುತಾನಾಂ ಸೇವಯಾ ದೇವತಾನಾಂ |**
**ನ ಭವತಿ ಸುಖಲೇಶಸ್ಸಂಶಯೋ ನಾಸ್ತಿ ತತ್ರ ||**
**ಅಜನಿಮಮೃತರೂಪಂ ಸಾಂಬಮೀಶಂಭಜಂತೇ |**
**ಯ ಇಹ ಪರಮಸೌಖ್ಯಂ ತೇ ಹಿ ಧನ್ಯಾ ಲಭಂತೇ ||೮೩||**

ಅವತಾರಿಕೆ|| ನಶ್ವರರಾದ ಇತರ ದೇವರುಗಳನ್ನು ಭಜಿಸಿದವರಿಗೆ ಸುಖವಿಲ್ಲ, ನಿತ್ಯನಾದ ನಿನ್ನಂ ಭಜಿಸಿದವರಿಗೆ ನಿತ್ಯೈಶ್ವರ್ಯವುಂಟೆಂದು ಹೇಳುತ್ತಾರೆ.

ಟೀ|| ಜನನಮೃತಿಯುತಾನಾಂ-ಜನನಮರಣಗಳೊಂದಿಗೆ ಸೇರಿದ ದೇವತಾನಾಂ-ಸಾಮಾನ್ಯ ದೇವತೆಗಳ, ಸೇವಯಾ-ಭಜನೆಯಿಂದ, ಸುಖ ಲೇಶಃ-ಅಲ್ಪಸುಖವೂ, ನಭವತಿ-ಉಂಟಾಗುವುದಿಲ್ಲ, ತತ್ರ-ಈ ವಿಷಯ ದಲ್ಲಿ, ಸಂಶಯಃ-ಸಂದೇಹವು, ನಾಸ್ತಿ-ಇಲ್ಲ; ಇಹ-ಈ ಲೋಕದಲ್ಲಿ, ಯೇ-ಯಾರು, ಅಜನಿಂ-ಉತ್ಪತ್ತಿಯಿಲ್ಲದವನಾಗಿಯೂ, ಅಮೃತರೂ ಪಂ-ಅಮೃತಸ್ವರೂಪ (ಆದಿಮಧ್ಯಾಂತರಹಿತನಾಗಿ ಶಾಶ್ವತ) ನಾಗಿಯೂ ಸಾಂಬಂ-ಪಾರ್ವತೀವಲ್ಲಭನಾಗಿಯೂ ಇರುವ, ಈಶಂ-ಪರಮೇಶ್ವರ ನನ್ನು, ಭಜಂತೇ-ಭಜಿಸುತ್ತಾರೋ, ಧನ್ಯಾಃ-ಧನ್ಯರಾದ, ತೇ-ಅವರು ಪರಮಸೌಖ್ಯಂ-ಅತ್ಯಂತ ಸೌಖ್ಯವನ್ನು, ಲಭಂತೇ-ಹೊಂದುತ್ತಲಿದಾರೆ. ಎಂದರೆ ಇತರ ದೇವತೆಗಳ ಭಜನೆಯಿಂದ ಫಲವಿಲ್ಲ, ಪರಮೇಶ್ವರನ ಭಜನೆಯಿಂದಲೇ ನಿತ್ಯಾನಂದವುಂಟೆಂದು ಭಾವವು.

**ಶಿವ ! ತವ ಪರಿಚರ್ಯಾಃಸನ್ನಿಧಾನಾಯ ಗೌರ್ಯಾಃ |**
**ಭವ ! ಮಮ ಗುಣಧುರ್ಯಾಂ ಬುದ್ಧಿಕನ್ಯಾಂ ಪ್ರದಾಸ್ಯೇ ! ||**
**ಸಕಲಭುವನಬಂಧೋ ! ಸಚ್ಚಿದಾನಂದಸಿಂಧೋ ! |**
**ಸದಯ ! ಹೃದಯಗೇಹೇ ಸರ್ವದಾ ಸಂವಸ ತ್ವಂ ||೬೪||**

ಅವತಾರಿಕೆ|| ತಮ್ಮ ಹೃದಯದಲ್ಲಿ ಪರಮೇಶ್ವರನು ಸದಾ ವಾಸ ಮಾಡಬೇಕೆನ್ನುತ್ತಾರೆ.

ಟೀ|| ಹೇ ಶಿವ !-ಎಲೈ ಮಂಗಳಕರನೇ !, ಹೇ ಭವ !-ಎಲೈ ಜಗದುತ್ಪತ್ತಿ ಕಾರಣನೇ !, ಹೇ ಸಕಲಭುವನಬಂಧೋ !-ಎಲೈ ಸಕಲ ಲೋಕ ಬಂಧುವೇ !, ಹೇ ಸಚ್ಚಿದಾನಂದ ಸಿಂಧೋ !-ಎಲೈ ಚಿದಾ ನಂದ ಸಮುದ್ರನೇ !, ಗೌರ್ಯಾಃ ಸಹ-ಪಾರ್ವತೀ ದೇವಿಯೊಂದಿಗೆ, ತವ-ನಿನ್ನ, ಪರಿಚರ್ಯಾಸನ್ನಿಧಾನಾಯ-ಸೇವೆಯಲ್ಲಿ ಜಾಗರೂಕಳಾಗಿ

ರುವುದಕ್ಕಾಗಿ, ಗುಣಧುರ್ಯಾಂ-ಸದ್ಗುಣಗಳಿಂದ ಶ್ರೇಷ್ಠೆಯಾಗಿ ಇರುವಂಥಾ, ಮಮ-ನನ್ನ, ಬುದ್ಧಿಕನ್ಯಾಂ-ಬುದ್ಧಿಯೆಂಬ ಕನ್ನಿಕೆಯನ್ನು, ಪ್ರದಾಸ್ಯೇ-ಅರ್ಪಿಸುತ್ತೇನೆ ; ಹೇ ಸದಯ !-ಎಲೈ ದಯಾಳುವೇ !, ಹೃದಯಗೇಹೇ-ನನ್ನ ಮನಸ್ಸೆಂಬ ಗೃಹದಲ್ಲಿ, ತ್ವಂ-ನೀನು, ಸರ್ವದಾ-ಯಾವಾಗಲೂ, ಸಂವಸ-ವಾಸಮಾಡು. ಎಂದರೆ ಸದಾ ನನ್ನ ಹೃದಯದಲ್ಲಿ ನೀನು ನೆಲೆಗೊಂಡಿರಬೇಕೆಂದು ಭಾವವು.

**ಜಲಧಿಮಥನದಕ್ಷೋ ನೈವ ಪಾತಾಳಭೇದೀ ।**
**ನ ಚ ವನಮೃಗಯಾಯಾಂ ನೈವ ಲುಬ್ಧಃ ಪ್ರವೀಣಃ ॥**
**ಅಶನಕುಸುಮಭೂಷಾವಸ್ತ್ರಮುಖ್ಯಾಂ ಸಪರ್ಯಾಂ ।**
**ಕಥಯ ಕಥಮಹಂ ತೇ ಕಲ್ಪಯಾನೀಂದುಮೌಳೇ! ॥೮೫॥**

ಅವತಾರಿಕೆ॥ ಈಶ್ವರನಿಗೆ ತಕ್ಕ ನೈವೇದ್ಯೋಪಚಾರಗಳನ್ನು ಮಾಡುವುದಕ್ಕೆ ತಾವು ಅಸಮರ್ಥರೆಂದು ಹೇಳುತ್ತಾರೆ.

ಟೀ॥ ಹೇ ಇಂದುಮೌಳೇ !-ಎಲೈ ಚಂದ್ರಶೇಖರನೇ, ಅಹಂ-ನಾನು, ಜಲಧಿಮಥನದಕ್ಷಃ-ಸಮುದ್ರ ಮಥನದಲ್ಲಿ ಸಮರ್ಥನು, ನ-ಅಲ್ಲ, ಪಾತಾಳಭೇದೀ-ಪಾತಾಳವನ್ನು ಪ್ರವೇಶಿಸುವನು, ನ-ಅಲ್ಲ, ವನಮೃಗಯಾಯಾಂ-ಅರಣ್ಯದಲ್ಲಿ ಬೇಟೆಯಾಡುವುದರಲ್ಲಿ, ಪ್ರವೀಣಃ-ಸಮರ್ಥನಾದ, ಲುಬ್ಧಃ-ಕಿರಾತನು, ನಚ-ಅಲ್ಲ, ಹೀಗಿರುವುದರಲ್ಲಿ, ತೇ-ನಿನಗೆ, ಅಶನಕುಸುಮಭೂಷಾವಸ್ತ್ರಮುಖ್ಯಾಂ-ಭೋಜನ ಪುಷ್ಪ ಆಭರಣ ವಸ್ತ್ರ ಮೊದಲಾದ, ಸಪರ್ಯಾಂ-ಪೂಜೆಯನ್ನು, ಕಥಂ-ಹೇಗೆ, ಕಲ್ಪಯಾನಿ-ಮಾಡುವೆನು? ಕಥಯ-ಹೇಳು. ಎಂದರೆ ನಿನಗೆ ಇಷ್ಟವಾದ ಪೂಜೆಯಂ ಮಾಡುವುದಕ್ಕೆ ನನಗೆ ಯೋಗ್ಯತೆ ಸಾಲದು. ಸಮುದ್ರವಂ ಕಡೆದು ಅಪಾರವಾದ ವಿಷವನ್ನು, ಧರಿಸತಕ್ಕ ಹೂವಾದ ಚಂ

ದ್ರನನ್ನು, ಆಭರಣವಾದ ಸರ್ಪವನ್ನು, ವಸ್ತ್ರವಾದ ಗಜಚರ್ಮವನ್ನು, ಕೊಡಲಾರೆನೆಂದು ಭಾವವು.

ಪೂಜಾದ್ರವ್ಯಸಮೃದ್ಧಯೋ ವಿರಚಿತಾಃ ಪೂಜಾಂಕಥಂ ಕುರ್ಮಹೇ ।
ಪಕ್ಷಿತ್ವಂ ನ ಚ ವಾ ಕಿಟಿತ್ವಮಪಿ ನ ಪ್ರಾಪ್ತಂ ಮಯಾ ದುರ್ಲಭಮ್ ॥
ಜಾನೇಮಸ್ತಕಮಂಘ್ರಿಪಲ್ಲವಮುಮಾಜಾನೇ ! ನ ತೇಽಹಂ ವಿಭೋ ।
ನ ಜ್ಞಾತಂ ಹಿ ಪಿತಾಮಹೇನ ಹರಿಣಾ ತತ್ತ್ವೇನ ತದ್ರೂಪಿಣಾ ॥೮೬॥

ಅವತಾರಿಕೆ॥ ಅಥವಾ ಪೂಜಾದ್ರವ್ಯಗಳನ್ನು ಸಿದ್ಧಮಾಡಿಕೊಂಡರೂ, ನಿನ್ನಂ ಪೂಜಿಸಲಾರೆನೆನ್ನುತ್ತಾರೆ.

ಟೀ॥ ಹೇ ಉಮಾಜಾನೇ !-ಎಲೈ ಪಾರ್ವತೀಪತಿಯೇ !, ಹೇ ವಿಭೋ !-ಎಲೈ ವ್ಯಾಪಕನೇ !, ಪೂಜಾದ್ರವ್ಯಸಮೃದ್ಧಯಃ-ಪೂಜಾದ್ರವ್ಯಗಳ ಸಮೃದ್ಧಿಗಳು, ವಿರಚಿತಾಃ-ಮಾಡಲ್ಪಟ್ಟರೂ, ಪೂಜಾಂ-ಪೂಜೆಯನ್ನು, ಕಥಂ-ಹೇಗೆ, ಕುರ್ಮಹೇ-ಮಾಡುವೆವು, ಮಯಾ-ನನ್ನಿಂದ, ದುರ್ಲಭಂ-ದುರ್ಲಭವಾದ, ಪಕ್ಷಿತ್ವಂ ವಾ-(ಹಂಸ) ಪಕ್ಷಿತ್ವವಾದರೂ, ಕಿಟಿತ್ವಂ ವಾ-ವರಾಹತ್ವವಾದರೂ, ನ ಪ್ರಾಪ್ತಂ-ಹೊಂದಲ್ಪಡಲಿಲ್ಲ; ಯಾವುದು, ತತ್ತ್ವೇನ-ಯಥಾರ್ಥವಾಗಿ, ತದ್ರೂಪಿಣಾ-ಆ ರೂಪಗಳನ್ನು ಪಡೆದಂಥಾ, ಪಿತಾಮಹೇನ-ಬ್ರಹ್ಮನಿಂದಲೂ, ಹರಿಣಾ-ವಿಷ್ಣುವಿನಿಂದಲೂ, ನಜ್ಞಾತಂ-ತಿಳಿಯಲ್ಪಡಲಿಲ್ಲವೋ ಅಂಥಾ, ತೇ-ನಿನ್ನ, ಮಸ್ತಕಂ-ತಲೆಯನ್ನೂ, ಅಂಘ್ರಿಪಲ್ಲವಂ-ಮೃದುವಾದ ಪಾದಗಳನ್ನೂ, ಅಹಂ-ನಾನು, ನಜಾನೇ-ಅರಿಯೆನು; ಎಂದರೆ ನಿನ್ನ ಪೂಜೆಯು ನನಗೆ ಅಸಾಧ್ಯವೆಂದು ಭಾವವು.

ಅಶನಂ ಗರಳಂ ಫಣೀ ಕಲಾಪೋ ।
ವಸನಂ ಚರ್ಮಚ ವಾಹನಂ ಮಹೋಕ್ಷಃ ॥

ಮಮ ದಾಸ್ಯಸಿ ಕಿಂ ಕಿಮಸ್ತಿ ಶಂಭೋ ।
ತವ ಪಾದಾಂಬುಜಭಕ್ತಿಮೇವ ದೇಹಿ ॥೮೭॥

ಅವತಾರಿಕೆ ॥ ನಾನು ನಿನ್ನನ್ನಪೇಕ್ಷಿಸಿದರೂ ನಿನಗೆ ಕೊಡುವುದಕ್ಕೆ ಏನೂ ಗತಿಯಿಲ್ಲವೆನ್ನುತ್ತಾರೆ.

ಟೀ॥ ಹೇ ಶಂಭೋ !-ಎಲೈ ಶಂಭುವೇ!, ತವ-ನಿನಗೆ, ಅಶನಂ-ಆಹಾರವು, ಗರಳಂ-ವಿಷವು, ಕಲಾಪಃ-ಆಭರಣವು, ಫಣೀ-ಸರ್ಪವು, ವಸನಂ-ವಸ್ತ್ರವು, ಚರ್ಮ-ತೊಗಲು, ವಾಹನಂ-ವಾಹನವು, ಮಹೋಕ್ಷಃ-ಎತ್ತು,ಆಗಿದೆ; ಮಮ-ನನಗೆ, ಕಿಂ-ಯಾವುದನ್ನು, ದಾಸ್ಯಸಿ-ಕೊಡಲುಳ್ಳವನು; ಕಿಂ-ಯಾವುದು, ಅಸ್ತಿ-ಇದೆ; ಆದಾಗ್ಯೂ, ತವ-ನಿನ್ನ, ಪಾದಾಂಬುಜಭಕ್ತಿಮೇವ-ಪಾದಪದ್ಮದ ಭಕ್ತಿಯನ್ನೇ,ದೇಹಿ-ಕೊಡು. ಎಂದರೆ ನಿನ್ನ ಪಾದಾಂಬುಜದ ಭಕ್ತಿಯನ್ನು ಬಿಟ್ಟು ಇತರವನ್ನು ತಾನಪೇಕ್ಷಿಸುವುದಿಲ್ಲವೆಂದು ಭಾವವು.

ಯದಾಕೃತಾಂಭೋನಿಧಿಸೇತುಬಂಧನಃ ।
ಕರಸ್ಥಲಾಧಃಕೃತ ಪರ್ವತಾಧಿಪಃ ॥
ಭವಾನಿ ತೇ ಲಂಘಿತಪದ್ಮ ಸಂಭವ ।
ಸ್ತದಾ ಶಿವಾರ್ಚಾಸ್ತವಭಾವನಾಕ್ಷಮಃ ॥೮೮॥

ಅವತಾರಿಕೆ॥ ಪರಮೇಶ್ವರನ ಪೂಜಾಸ್ತುತಿ ಧ್ಯಾನಗಳಲ್ಲಿ ತಮಗೆ ಯೋಗ್ಯತೆಯಿಲ್ಲವೆನ್ನುತ್ತಾರೆ.

ಟೀ॥ ಹೇ ಶಿವ !-ಎಲೈ ಶಿವನೇ !, ಯದಾ-ಯಾವಾಗ, ನಾನು ಕೃತಾಂಭೋನಿಧಿಸೇತುಬಂಧನಃ, ಕೃತ-ಮಾಡಲ್ಪಟ್ಟ, ಅಂಭೋನಿಧಿ-ಸಮುದ್ರದಲ್ಲಿ, ಸೇತುಬಂಧನಃ-ಸೇತುಬಂಧನವುಳ್ಳವನಾಗಿಯೂ, ಕರಸ್ಥಲಾಧಃಕೃತಪರ್ವತಾಧಿಪಃ, ಕರಸ್ಥಲ-ಕೈಯಿಂದ, ಅಧಃಕೃತ-ಕೆಳಗೆ

ಮುಲಗಿಸಲ್ಪಟ್ಟ, ಪರ್ವತಾಧಿಪಃ-ವಿಂಧ್ಯಪರ್ವತವುಳ್ಳವನಾಗಿಯೂ, ಲಂಘಿತಪದ್ಮಸಂಭವಃ, ಲಂಘಿತ-ಜಯಿಸಲ್ಪಟ್ಟ, ಪದ್ಮಸಂಭವಃ-ಬ್ರಹ್ಮನುಳ್ಳವನಾಗಿಯೂ, ಭವಾನಿ-ಆಗುತ್ತೀನೋ, ತದಾ-ಆಗ, ತೇ-ನಿನ್ನ, ಅರ್ಚಾಸ್ತವಭಾವನಾಕ್ಷಮಃ, ಅರ್ಚಾ-ಪೂಜೆಯು, ಸ್ತವ-ಸ್ತೋತ್ರವು, ಭಾವನಾ-ಧ್ಯಾನವು, ಇವುಗಳಲ್ಲಿ, ಕ್ಷಮಃ-ಯೋಗ್ಯನಾಗಿ, ಭವಾನಿ-ನಾನು ಆಗಲುಳ್ಳವನು. ಎಂದರೆ ಶ್ರೀರಾಮನು, ಅಗಸ್ತ್ಯನು, ಬ್ರಹ್ಮನು ಇವರುಗಳಂತೆ ನಾನಾದರೆ ನಿನ್ನ ಪೂಜಾದಿಗಳನ್ನು ಮಾಡುವೆನೆಂದು ಭಾವವು.

ನತಿಭಿ ರ್ನುತಿಭಿ ಸ್ತ್ವಮೀಶ ! ಪೂಜಾ ।
ವಿಧಿಭಿರ್ಧ್ಯಾನ ಸಮಾಧಿಭಿ ರ್ನ ತುಷ್ಟಃ ॥
ಧನುಷಾ ಮುಸಲೇನ ಚಾಶ್ಮಭಿರ್ವಾ ।
ವದ ತೇ ಪ್ರೀತಿಕರಂ ತಥಾ ಕರೋಮಿ ॥೮೯॥

ಅವತಾರಿಕೆ॥ ಶಾಸ್ತ್ರವಿಹಿತಗಳಾದ ಸ್ತೋತ್ರಾದಿಗಳಿಂದ ನೀನು ತೃಪ್ತಿಯಂ ಪಡೆಯುವುದಿಲ್ಲವೆಂದು ಹೇಳುತ್ತಾರೆ.

ಟೀ॥ ಹೇ ಈಶ !-ಎಲೈ ಈಶ್ವರನೇ !, ತ್ವಂ-ನೀನು, ನತಿಭಿಃ-ನಮಸ್ಕಾರಗಳಿಂದಲೂ, ಪೂಜಾವಿಧಿಭಿಃ-ಪೂಜಾವಿಧಾನಗಳಿಂದಲೂ, ಧ್ಯಾನಸಮಾಧಿಭಿರ್ವಾ-ಧ್ಯಾನಸಮಾಧಿಗಳಿಂದಲಾದರೂ, ತುಷ್ಟಃ-ಸಂತುಷ್ಟನಾದವನು, ನ-ಅಲ್ಲ, ಧನುಷಾ-ಬಿಲ್ಲಿನಿಂದಲೂ, ಮುಸಲೇನ-ಒನಕೆಯಿಂದಲೂ, ಅಶ್ಮಭಿರ್ವಾ-ಕಲ್ಲುಗಳಿಂದಲಾದರೂ, ತೇ-ನಿನಗೆ, ಪ್ರೀತಿಕರಂ-ಪ್ರೀತಿಯನ್ನುಂಟುಮಾಡುವುದು ಯಾವ ವಿಧವೋ, ವದ-ಹೇಳು, ತಥಾ-ಆ ಪ್ರಕಾರ, ಕರೋಮಿ-ಮಾಡುತ್ತೇನೆ; ಎಂದರೆ ಪೂಜಾದ್ಯುಪಚಾರಗಳಿಂದ ನಿನ್ನ ದಯೆಯುಂಟಾಗಲಿಲ್ಲ, ಪುರಾಣ ಪ್ರಸಿದ್ಧವಾದ ಕಥೆ

ಯಂತೆ ಧನುಸ್ಸು ಮೊದಲಾದುವುಗಳಿಂದ ಹೊಡೆಯುವ ಕೆಲಸಗಳಲ್ಲಿ ಯಾವುದು ನಿನಗೆ ಇಷ್ಟವೋ ಅದನ್ನು ಹೇಳಿದರೆ ಆಮೇಲೆ ಮಾಡೇನೆಂದು ಭಾವವು.

**ವಚಸಾ ಚರಿತಂ ವದಾಮಿ ಶಂಭೋ |**
**ರಹಮುದ್ಯೋಗವಿಧಾಸು ತೇ ಪ್ರಸಕ್ತಃ ||**
**ಮನಸಾಕೃತಿಮೀಶ್ವರಸ್ಯ ಸೇವೇ |**
**ಶಿರಸಾ ಚೈವ ಸದಾಶಿವಂ ನಮಾಮಿ ||೯೦||**

ಅವತಾರಿಕೆ|| ವಾಗಾದಿಕರಣಗಳಿಂದ ಶಿವನ ಸೇವೆಯಂ ಮಾಡುತ್ತೇವೆಂದು ಹೇಳುತ್ತಾರೆ.

ಟೀ|| ಅಹಂ-ನಾನು, ಉದ್ಯೋಗವಿಧಾಸು-ಸ್ಥಿರವಾಗಿ ನಿನ್ನಲ್ಲಿ ಚಿತ್ತವನ್ನರ್ಪಿಸುವ ರೀತಿಗಳಲ್ಲಿ, ಪ್ರಸಕ್ತಃ-ಸಂಕಲ್ಪವನ್ನು ಮಾಡಿದವನಾಗಿ, ವಚಸಾ-ವಾಕ್ಕಿನಿಂದ, ಶಂಭೋಃ-ಪರಮೇಶ್ವರನ, ಚರಿತಂ-ಚರಿತ್ರವನ್ನು, ವದಾಮಿ-ಹೇಳುತ್ತೇನೆ, ಮನಸಾ-ಮನಸ್ಸಿನಿಂದ, ಈಶ್ವರಸ್ಯ-ಈಶ್ವರನ ಆಕೃತಿಂ-ಆಕಾರವನ್ನು, ಸೇವೇ-ಧ್ಯಾನಿಸುತ್ತೇನೆ; ಶಿರಸಾ ಚ-ತಲೆಯಿಂದಲೂ, ಸದಾಶಿವಂ-ಶಿವನನ್ನು, ನಮಾಮಿ-ನಮಸ್ಕರಿಸುತ್ತೇನೆ. ಎಂದರೆ ನನ್ನ ಸರ್ವ ಕರಣಗಳಿಂದಲೂ ಶಿವಭಜನವಂ ಮಾಡುತ್ತೇನೆಂದು ಭಾವವು.

**ಆದ್ಯಾವಿದ್ಯಾ ಹೃದ್ಗತಾ ನಿರ್ಗತಾಸೀ |**
**ದ್ವಿದ್ಯಾ ಹೃದ್ಯಾ ಹೃದ್ಗತಾ ತ್ವತ್ಪ್ರಸಾದಾತ್ ||**
**ಸೇವೇ ನಿತ್ಯಂ ಶ್ರೀಕರಂ ತ್ವತ್ಪದಾಬ್ಜಂ |**
**ಭಾವೇ ಮುಕ್ತೇರ್ಭಾಜನಂ ರಾಜಮೌಳೇ ! ||೯೧||**

ಅವತಾರಿಕೆ|| ಪರಮ ಶಿವಭಕ್ತಿಯಿಂದ ತಮಗೆ ಸರ್ವ ಪ್ರಯೋಜನಗಳೂ ಕೈಗೂಡಿದುವೆನ್ನುತ್ತಾರೆ.

ಟೀ|| ಹೇ ರಾಜಮೌಳೇ !-ಎಲೈ ಚಂದ್ರಮೌಳಿಯೇ !, ತ್ವತ್ಪ್ರಸಾದಾತ್-ನಿನ್ನ ಅನುಗ್ರಹದಿಂದ, ಹೃದ್ಗತಾ-ನನ್ನ ಹೃದಯವನ್ನು ಹೊಂದಿರುವ, ಆದ್ಯಾ-ಚಿರಕಾಲದಿಂದಿರುವ, ಅವಿದ್ಯಾ-ಮಾಯೆಯು, ನಿರ್ಗತಾ-ಕಳೆದುಹೋದುದಾಗಿ, ಆಸೀತ್-ಆಯಿತು; ಹೃದ್ಯಾ-ಮನೋಜ್ಞವಾದ, ವಿದ್ಯಾ-ಬ್ರಹ್ಮ ವಿದ್ಯೆಯು, ಹೃದ್ಗತಾ-ಮನಸ್ಸನ್ನು ಹೊಂದಿತು, ಶ್ರೀಕರಂ-ಐಶ್ವರ್ಯಪ್ರದವಾಗಿಯೂ, ಮುಕ್ತ್ಯೈ-ಮೋಕ್ಷಕ್ಕೆ, ಭಾಜನಂ-ಪಾತ್ರವಾಗಿಯೂ ಇರುವ, ತ್ವತ್ಪದಾಬ್ಜಂ-ನಿನ್ನ ಪಾದಾಂಬುಜವನ್ನು, ನಿತ್ಯಂ-ಸರ್ವ ಕಾಲವೂ, ಭಾವೇ-ಹೃದಯದಲ್ಲಿ, ಸೇವೇ-ಧ್ಯಾನಿಸುತ್ತೇನೆ. ಎಂದರೆ ನಿನ್ನ ಕೃಪೆಯಿಂದ ಅನಿಷ್ಟ ಕಳೆದು ಸದಾ ನಿನ್ನ ಧ್ಯಾನದಲ್ಲಿ ಇದೇನೆಂದು ಭಾವವು.

ದೂರೀಕೃತಾನಿ ದುರಿತಾನಿ ದುರಕ್ಷರಾಣಿ |
ದೌರ್ಭಾಗ್ಯ ದುಃಖ ದುರಹಂಕೃತಿ ದುರ್ವಚಾಂಸಿ ||
ಸಾರಂ ತ್ವದೀಯ ಚರಿತಂ ನಿತರಾಂ ಪಿಬಂತಂ |
ಗೌರೀಶ ! ಮಾಮಿಹ ಸಮುದ್ಧರ ಸತ್ಕಟಾಕ್ಷೈಃ ! ||೯೨||

ಅವತಾರಿಕೆ|| ದುಷ್ಕಾರ್ಯಗಳನ್ನು ಬಿಟ್ಟ ನಿನ್ನ ದಾಸನಾದ ನನ್ನಂ ರಕ್ಷಿಸಬೇಕೆನ್ನುತ್ತಾರೆ.

ಟೀ|| ಹೇ ಗೌರೀಶ !-ಎಲೈ ಪಾರ್ವತೀಪತಿಯೇ !, ದುರಿತಾನಿ-ಪಾಪಗಳು, ದುರಕ್ಷರಾಣಿ-ಕೆಟ್ಟ ಹಣೆಯ ಬರಹಗಳು, ದೌರ್ಭಾಗ್ಯ ದುಃಖದುರಹಂಕೃತಿದುರ್ವಚಾಂಸಿ-ದೌರ್ಭಾಗ್ಯವು, ದುಃಖವು, ದುರಹಂಕಾರವು, ಕೆಟ್ಟ ಮಾತುಗಳು, ಇವೆಲ್ಲವೂ, ದೂರೀಕೃತಾನಿ-ದೂರವಾಗಿ ಮಾಡಲ್ಪಟ್ಟವು; ಸಾರಂ-ಸಾರಭೂತವಾದ, ತ್ವದೀಯಚರಿತಂ-ನಿನ್ನ ಚರಿತ್ರವನ್ನು, ನಿತರಾಂ-ಚೆನ್ನಾಗಿ, ಪಿಬಂತಂ ಮನಸ್ಸಿನಿಂದ ಪಾನ

ಮಾಡುತ್ತಿರುವ, ಮಾಂ-ನನ್ನನ್ನು, ಇಹ-ಈ ಲೋಕದಲ್ಲಿ, ಸತ್ಕಟಾಕ್ಷೈಃ-ಸ್ಥಿರವಾದ ಕಟಾಕ್ಷಗಳಿಂದ, ಸಮುದ್ಧರ-ಉದ್ಧಾರ ಮಾಡು. ಎಂದರೆ ನಿನ್ನ ಭಕ್ತರನ್ನು ನೀನೇ ರಕ್ಷಿಸಬೇಕೆಂದು ಭಾವವು.

**ಸೋಮಕಲಾಧರಮೌಳೌ ।**
**ಕೋಮಲಘನಕಂಧರೇ ಮಹಾ ಮಹಸಿ ॥**
**ಸ್ವಾಮಿನಿ ಗಿರಿಜಾನಾಥೇ ।**
**ಮಾಮಕ ಹೃದಯಂ ನಿರಂತರಂ ರಮತಾಂ ॥೯೩॥**

ಅವತಾರಿಕೆ॥ ಸರ್ವೋತ್ಕೃಷ್ಟನಾದ ಪರಮೇಶ್ವರನಲ್ಲಿ ತನಗೆ ಸದಾ ನೆಲೆಯುಂಟಾಗಲೆನ್ನುತ್ತಾರೆ.

ಟೀ॥ ಸೋಮಕಲಾಧರಮೌಳೌ-ಚಂದ್ರಕಲೆಯಂ ಧರಿಸಿದ ತಲೆಯುಳ್ಳವನಾಗಿಯೂ, ಕೋಮಲಘನಕಂಧರೇ-ಮನೋಜ್ಞವಾದ ನೀಲಮೇಘದೋಪಾದಿ ಕತ್ತುಳ್ಳಂಥಾ, ಸ್ವಾಮಿನಿ-ಪ್ರಭುವಾದಂಥಾ, ಗಿರಿಜಾನಾಥೇ-ಪಾರ್ವತೀಪತಿಯಾದ, ಮಹಾ-ಮಹತ್ತಾದ, ಮಹಸಿ-ತೇಜಸ್ಸಿನಲ್ಲಿ, ಮಾಮಕಹೃದಯಂ-ನನ್ನ ಮನಸ್ಸು, ನಿರಂತರಂ-ಎಡೆಬಿಡದೆ, ರಮತಾಂ-ವಿಹಾರ ಮಾಡಲಿ.

**ಸಾ ರಸನಾ ತೇ ನಯನೇ ತಾವೇವ ಕರೌ ಸ ಏವಕೃತಕೃತ್ಯಃ ॥**
**ಯಾ ಯೇ ಯೌ ಯೋ ಭರ್ಗಂ ವದತೀಕ್ಷೇತೇ ಸದಾರ್ಚತಸ್ಮರತಿ ॥**

ಅವತಾರಿಕೆ॥ ಸರ್ವ ಕರಣಗಳೂ ಶಿವನ ಕೈಂಕರ್ಯದಲ್ಲಿ ವಿನಿಯೋಗಿಸಲ್ಪಡಬೇಕೆನ್ನುತ್ತಾರೆ.

ಟೀ॥ ಭರ್ಗಂ-ಪಾಪವನ್ನು ಹೋಗಲಾಡಿಸುವ ಪರಮೇಶ್ವರನನ್ನು, ಯಾ-ಯಾವುದು, ವದತಿ-ಹೇಳುತ್ತದೋ, ಯೇ-ಯಾವುವು, ಈಕ್ಷೇತೇ-ನೋಡುತ್ತವೋ, ಯೌ-ಯಾವುವು, ಅರ್ಚತಃ-ಅರ್ಚಿಸುತ್ತ

ಲಿವೆಯೋ, ಯಃ-ಯಾವನು, ಸದಾ-ಯಾವಾಗಲೂ, ಸ್ಮರತಿ-ಧ್ಯಾನಿಸುತ್ತಲಿವಾನೋ, ಸಾ-ಅದೇ, ರಸನಾ-ನಾಲಗೆಯು, ತೇ-ಅವುಗಳೇ, ನಯನೇ-ಕಣ್ಣುಗಳು, ತಾವೇವ ಕರೌ-ಅವುಗಳೇ ಕೈಗಳು, ಸ ಏವ-ಅವನೇ, ಕೃತಕೃತ್ಯಃ-ಕೃತಕೃತ್ಯನು. ಎಂದರೆ ಹೀಗೆ ಅಲ್ಲದುವುಗಳೆಲ್ಲಾ ವ್ಯರ್ಥಗಳೆಂದು ಭಾವವು.

ಅತಿಮೃದುಲೌ ಮಮ ಚರಣಾ ।
ವತಿಕಠಿನಂ ತೇ ಮನೋ ಭವಾನೀಶ ! ॥
ಇತಿ ವಿಚಿಕಿತ್ಸಾಂ ಸಂತ್ಯಜ ।
ಶಿವಕಥಮಾಸೀದ್ಗಿರೌ ತಥಾವೇಶಃ ॥೯೫॥

ಅವತಾರಿಕೆ॥ ತಮ್ಮ ಹೃದಯದಲ್ಲಿ ಈಶ್ವರನ ಸಾನ್ನಿಧ್ಯಕ್ಕಾಗಿ ಯುಕ್ತಿಯನ್ನು ಹೇಳುತ್ತಾರೆ.

ಟೀ॥ ಹೇ ಭವಾನೀಶ!-ಎಲೈ ಪಾರ್ವತೀಪತಿಯೇ!, ಹೇ ಶಿವ!-ಎಲೈ ಮಂಗಳಕರನೇ !, ಮಮ-ನನ್ನ, ಚರಣೌ-ಪಾದಗಳು, ಅತಿಮೃದುಳೌ-ಅತ್ಯಂತ ಮೃದುಗಳು, ತೇ-ನಿನ್ನ, ಮನಃ-ಮನಸ್ಸು, ಅತಿಕಠಿನಂ-ಅತ್ಯಂತ ಕಠಿನವು, ಇತಿ-ಎಂಬುದಾಗಿ, ವಿಚಿಕಿತ್ಸಾಂ-ಸಂಶಯವನ್ನು ಸಂತ್ಯಜ-ಬಿಡು, ತೇ-ನಿನಗೆ, ಗಿರೌ-ಕೈಲಾಸ ಪರ್ವತದಲ್ಲಿ, ಆವೇಶಃ-ಸಂಚಾರವು, ಕಥಂ-ಹೇಗೆ, ಆಸೀತ್-ಆಯಿತು ॥ಸ್ಪಷ್ಟಾರ್ಥವು॥

ಧೈರ್ಯಾಂಕುಶೇನ ನಿಭೃತಂ ।
ರಭಸಾದಾಕೃಷ್ಯ ಭಕ್ತಿಶೃಂಖಲಯಾ ॥
ಪುರಹರ ಚರಣಾಲಾನೇ ।
ಹೃದಯ ಮದೇಭಂ ಬಧಾನ ಚಿದ್ಯಂತ್ರೈಃ ॥೯೬॥

ಅವತಾರಿಕೆ॥ ಕೊಬ್ಬಿದ ನನ್ನ ಮನಸ್ಸನ್ನು ನೀನೇ ಶಿಕ್ಷಿಸಬೇಕೆನ್ನುತ್ತಾರೆ.

ಟೀ|| ಹೇ ಪುರಹರ!-ಎಲೈ ತ್ರಿಪುರಾಂತಕನೇ!, ಹೃದಯಮದೇಭಂ-ನನ್ನ ಹೃದಯವೆಂಬ ಕೊಬ್ಬಿದ ಆನೆಯನ್ನು, ಧೈರ್ಯಾಂಕುಶೇನ, ಧೈರ್ಯ-ಧೈರ್ಯವೆಂಬ, ಅಂಕುಶೇನ-ಅಂಕುಶದಿಂದ, ನಿಭೃತಂ-ನಿಶ್ಚಲವನ್ನಾಗಿ ಮಾಡಿ, ಭಕ್ತಿಶೃಂಖಲಯಾ-ಭಕ್ತಿಯೆಂಬ ಸರಪಣಿಯಿಂದ, ರಭಸಾತ್-ಬಲದೊಡನೆ, ಆಕೃಷ್ಯ-ಸೆಳೆದು, ಚಿದ್ಯಂತ್ರೈಃ-ಚಿತ್-ಜ್ಞಾನವೆಂಬ, ಯಂತ್ರೈಃ-ಯಂತ್ರಗಳಿಂದ, ಚರಣಾಲಾನೇ-(ನಿನ್ನ) ಪಾದವೆಂಬ, ಕಂಬದಲ್ಲಿ, ಬಧಾನ-ಕಟ್ಟು. ಎಂದರೆ ನನ್ನ ಮನಸ್ಸು ಸದಾ ನಿನ್ನ ಪಾದಾಬ್ಜದಲ್ಲಿ ನೆಲೆಗೊಂಡಿರಲೆಂದು ಭಾವವು.

ಪ್ರಚರತ್ಯಭಿತಃ ಪ್ರಗಲ್ಭವೃತ್ತ್ಯಾ |
ಮದವಾನೇಷಮನಃಕರೀ ಗರೀಯಾನ್ ||
ಪರಿಗೃಹ್ಯ ನಯೇನ ಭಕ್ತಿರಜ್ಜ್ವಾ |
ಪರಮಸ್ಥಾಣುಪದಂ ದೃಢಂ ನಯಾಮುಂ ||೯೭||

ಅವತಾರಿಕೆ || ಪೂರ್ವಶ್ಲೋಕಾರ್ಥವನ್ನೇ ಬೇರೆ ರೀತಿಯಾಗಿ ಹೇಳುತ್ತಾರೆ.

ಟೀ|| ಹೇ ಪರಮ !-ಎಲೈ ಪರಮಾತ್ಮನೇ !, ಮದವಾನ್-ಮದವುಳ್ಳಂಥಾ, ಗರೀಯಾನ್-ದೊಡ್ಡದಾದ, ಮನಃಕರೀ-ಮನಸ್ಸೆಂಬ ಆನೆಯು, ಪ್ರಗಲ್ಭವೃತ್ತ್ಯಾ-ಸ್ವತಂತ್ರವೃತ್ತಿಯಿಂದ, ಅಭಿತಃ-ಎಲ್ಲಾ ಕಡೆಯೂ, ಪ್ರಚರತಿ-ಸಂಚರಿಸುತ್ತಲಿದೆ, ಅಮುಂ-ಅದನ್ನು, ಭಕ್ತಿರಜ್ಜ್ವಾ-ಭಕ್ತಿಯೆಂಬ ಹಗ್ಗದಿಂದ, ನಯೇನ-ಉಪಾಯದಿಂದ, ಪರಿಗೃಹ್ಯ-ಪರಿಗ್ರಹಿಸಿ ಹಿಡಿದು, ದೃಢಂ-ದೃಢವಾಗಿ, ಸ್ಥಾಣುಪದಂ-ಈಶ್ವರನ ಪಾದವನ್ನು, ಮರದ ಬುಡವನ್ನು, ನಯ-ಹೊಂದಿಸು. ಎಂದರೆ ಮದಹತ್ತಿದ ಆನೆಯನ್ನು ಲಾಲನೆಯಿಂದ ಗ್ರಹಿಸಿ ಕಂಬದಲ್ಲಿ ಕಟ್ಟುವಂದದಿ

ನನ್ನ ಮನಸ್ಸನ್ನು ನಿನ್ನ ಪಾದದಲ್ಲಿ ಸೇರಿಸಬೇಕೆಂದು ಭಾವವು.

**ಸರ್ವಾಲಂಕಾರಯುಕ್ತಾಂ ಸರಳಪದಯುತಾಂ ಸಾಧುವೃತ್ತಾಂ ಸುವರ್ಣಾಂ |**
**ಸದ್ಭಿಸ್ಸಂಸ್ತೂಯಮಾನಾಂ ಸರಸಗುಣಯುತಾಂ ಲಕ್ಷಿತಾಂ ಲಕ್ಷಣಾಢ್ಯಾಂ ||**
**ಉದ್ಯದ್ಭೂಷಾವಿಶೇಷಾಮುಪಗತವಿನಯಾಂ ದ್ಯೋತಮಾನಾರ್ಥರೇಖಾಂ |**
**ಕಲ್ಯಾಣೀಂ ದೇವ ! ಗೌರೀ ಪ್ರಿಯ ! ಮಮ ಕವಿತಾಕನ್ಯಕಾಂ ತ್ವಂ ಗೃಹಾಣ||೯೮||**

ಅವತಾರಿಕೆ|| ಸರ್ವಗುಣ ಸಂಪನ್ನವಾದ ತಮ್ಮ ಕವಿತೆಯನ್ನು ಅಂಗೀಕರಿಸು ಎನ್ನುತ್ತಾರೆ.

ಟೀ || ಹೇ ಗೌರೀಪ್ರಿಯ !, ಹೇ ದೇವ !-ಎಲೈ ಗೌರೀಪ್ರಿಯನಾದ ದೇವನೇ !, ಸರ್ವಾಲಂಕಾರಯುಕ್ತಾಂ-ಸರ್ವ ಭೂಷಣಗಳಿಂದ ಭೂಷಿತೆಯಾಗಿಯೂ, ಶಬ್ದಾರ್ಥಾಲಂಕಾರಗಳಿಂದ ಯುಕ್ತವಾಗಿಯೂ, ಸರಳಪದಯುತಾಂ-ಮೃದುವಾದ ಪಾದವುಳ್ಳವಳಾಗಿಯೂ, ಮೃದುವಾದ ಪದಗಳುಳ್ಳುದಾಗಿಯೂ, ಸಾಧುವೃತ್ತಾಂ-ಯೋಗ್ಯವಾದ ಚರಿತ್ರವುಳ್ಳ, ಯೋಗ್ಯವಾದ ವೃತ್ತಗಳುಳ್ಳಂಥಾ, ಸುವರ್ಣಾಂ-ಯೋಗ್ಯವಾದ ವರ್ಣವುಳ್ಳಂಥಾ, ಅಕ್ಷರವುಳ್ಳಂಥಾ, ಸದ್ಭಿಃ-ಸತ್ಪುರುಷರಿಂದ, ವಿದ್ವಾಂಸರಿಂದ, ಸಂಸ್ತೂಯಮಾನಾಂ-ಶ್ಲಾಘಿಸಲ್ಪಟ್ಟಿರುವಂಥಾ, ಸರಸ-ಮಧುರವಾದ, ಗುಣಯುತಾಂ-ಸ್ತ್ರೀಗುಣ ಯುಕ್ತವಾದ, ಕಾವ್ಯಗುಣಗಳೊಂದಿಗೆ ಯುಕ್ತವಾದಂಥಾ, ಲಕ್ಷಿತಾಂ-ಕನ್ಯಾರ್ಥಿಗಳಿಂದ ಕೋರಲ್ಪಟ್ಟಂಥಾ, ವಸ್ತುಪ್ರಶಂಸರೂಪವಾದ, ಲಕ್ಷಣಾಢ್ಯಾಂ-ಸ್ತ್ರೀಲಕ್ಷಣಗಳುಳ್ಳಂಥಾ, ಕಾವ್ಯಲಕ್ಷಣಗಳುಳ್ಳಂಥಾ, ಉದ್ಯದ್ಭೂಷಾವಿಶೇಷಾಂ-ಪ್ರಕಾಶವಾದ ಭೂಷಣ ವಿಶೇಷವುಳ್ಳಂಥಾ, ಅಲಂಕಾರವುಳ್ಳಂಥಾ, ಉಪಗತವಿನಯಾಂ-ವಿನಯವುಳ್ಳಂಥಾ, ಪ್ರಾಪ್ತವಾದ ನಿಯಮವುಳ್ಳಂಥಾ, ದ್ಯೋತಮಾನಾರ್ಥರೇಖಾಂ-ಪ್ರಕಾಶಿಸಲ್ಪಟ್ಟ ಅರ್ಥವುಳ್ಳ

ಯವಾದಿರೇಖೆಯುಳ್ಳಂಥಾ, ಅಕ್ಷರರೇಖೆಯುಳ್ಳಂಥಾ, ಕಲ್ಯಾಣೀಂ-ಶುಭಕರಳಾದ, ಮಮ-ನನ್ನ, ಕವಿತಾಕನ್ಯಕಾಂ-ಕವಿತೆಯೆಂಬ ಕನ್ಯೆಯನ್ನು, ತ್ವಂ-ನೀನು, ಗೃಹಾಣ-ಗ್ರಹಿಸು. ಎಂದರೆ ನಿನ್ನ ಸ್ತುತಿರೂಪವಾದ ಈ ಕವಿತ್ವವನ್ನು ನೀನು ಅಂಗೀಕರಿಸಬೇಕೆಂದು ಭಾವವು.

**ಇದಂ ತೇ ಯುಕ್ತಂ ವಾ ಪರಮಶಿವ ! ಕಾರುಣ್ಯಜಲಧೇ ! |**
**ಗತೌ ತಿರ್ಯಗ್ರೂಪಂ ತವ ಪದಶಿರೋದರ್ಶನಧಿಯಾ ||**
**ಹರಿಬ್ರಹ್ಮಾಣೌ ತೌ ದಿವಿ ಭುವಿ ಚರಂತೌ ಶ್ರಮಯುತೌ |**
**ಕಥಂ ಶಂಭೋ ! ಸ್ವಾಮಿನ್ ! ಕಥಯ ಮಮ ವೇದ್ಯೋಽಸಿ ಪುರತಃ ||೯೯||**

ಅವತಾರಿಕೆ|| ನೀನು ಇತರ ದೇವತೆಗಳಿಗೆ ಅಶಕ್ಯನಾದರೂ ಭಕ್ತಪರಾಧೀನನೆನ್ನುತ್ತಾರೆ.

ಟೀ|| ಹೇ ಪರಮಶಿವ !-ಎಲೈ ಪರಮಶಿವನೇ!, ಹೇ ಕಾರುಣ್ಯಜಲಧೇ !-ಎಲೈ ಕೃಪಾಸಮುದ್ರನೇ !, ಹೇ ಶಂಭೋ !-ಎಲೈ ಶಂಭುವೇ !, ಹೇ ಸ್ವಾಮಿನ್ !-ಎಲೈ ಸ್ವಾಮಿಯೇ !, ತವ-ನಿನ್ನ, ಪದಶಿರೋದರ್ಶನಧಿಯಾ-ಕಾಲು ತಲೆಗಳನ್ನು ನೋಡುವ ಇಚ್ಛೆಯಿಂದ, ತಿರ್ಯಗ್ರೂಪಂ-ತಿರ್ಯಗ್ಜಾತಿ ರೂಪವನ್ನು, ಗತೌ-ಹೊಂದಿರುವಂಥಾ ಹರಿಬ್ರಹ್ಮಾಣೌ-ವಿಷ್ಣು ಬ್ರಹ್ಮರುಗಳು, ದಿವಿ-ಆಕಾಶದಲ್ಲೂ, ಭುವಿ-ಭೂಮಿಯಲ್ಲೂ, ಚರಂತೌ-ಸಂಚರಿಸಿದವರಾಗಿ, ಶ್ರಮಯುತೌ-ಶ್ರಮಪಟ್ಟವರಾದರು; ಅಂಥಾ ನೀನು, ಮಮ-ನನ್ನ, ಪುರತಃ-ಕಣ್ಣಿಗೆದುರಾಗಿ, ಕಥಂ-ಹೇಗೆ, ವೇದ್ಯಃ-ಗೋಚರನಾಗಿ, ಅಸಿ-ಆಗುತ್ತಲಿದ್ದೀಯೆ? ಇದಂ-ಇದು, ತೇ-ನಿನಗೆ, ಯುಕ್ತಂ ವಾ-ಯೋಗ್ಯವೇ? ಎಂದರೆ ಹರಿಬ್ರಹ್ಮಾದಿಗಳಿಗೆ ಅಗೋಚರನಾದ ನೀನು ಭಕ್ತರಿಗೆ ಸುಲಭನಾಗಿದ್ದೀಯೆ ಎಂದು ಭಾವವು.

**ಸ್ತೋತ್ರೇಣಾಲಮಹಂ ಪ್ರವಚ್ಮಿ ನ ಮೃಷಾ ದೇವಾ ವಿರಿಂಚಾದಯ |**
**ಸ್ತುತ್ಯಾನಾಂ ಗಣನಾ ಪ್ರಸಂಗ ಸಮಯೇ ತ್ವಾಮಗ್ರಗಣ್ಯಂ ವಿದುಃ ||**
**ಮಾಹಾತ್ಮ್ಯಾಗ್ರವಿಚಾರಣಪ್ರಕರಣೇ ಧಾನಾತುಷಸ್ತೋಮವ |**
**ದ್ಧೂತಾಸ್ತ್ವಾಂ ವಿದುರುತ್ತ ಮೋತ್ತಮಫಲಂ ಶಂಭೋ ಭವತ್ಸೇವಕಾಃ ||೧೦೦||**

ಅವತಾರಿಕೆ|| ನೀನೇ ಸರ್ವದೇವೋತ್ತಮನೆಂದು ಸತ್ಯವಾಗಿ ತಿಳಿದಿದೇನೆನ್ನುತ್ತಾರೆ.

ಟೀ|| ಹೇ ಶಂಭೋ !-ಎಲೈ ಶಂಭುವೇ !, ಅಹಂ-ನಾನು, ಮೃಷಾ-ಸುಳ್ಳನ್ನು, ನ ವಚ್ಮಿ-ಹೇಳುವುದಿಲ್ಲ; ಸ್ತೋತ್ರೇಣ-ಹೊಗಳಿಕೆಯು, ಅಲಂ-ಸಾಕು, ವಿರಿಂಚಾದಯಃ-ಬ್ರಹ್ಮನು ಮೊದಲಾದ,ದೇವಾಃ-ದೇವರುಗಳು, ಸ್ತುತ್ಯಾನಾಂ-ಸ್ತುತಿಸಲ್ಪಡತಕ್ಕವರ, ಗಣನಾಪ್ರಸಂಗ ಸಮಯೇ-ಎಣಿಸುವಿಕೆಯ ಪ್ರಸ್ತಾವ ಬಂದಾಗ, ತ್ವಾಂ-ನಿನ್ನನ್ನು, ಅಗ್ರಗಣ್ಯಂ-ಮೊದಲೆಣಿಸತಕ್ಕವನನ್ನಾಗಿ, ವಿದುಃ-ತಿಳಿದಿರುವರು; ಭವತ್ಸೇವಕಾಃ-ನಿನ್ನ ಭಕ್ತರು, ಮಹಾತ್ಮ್ಯಾಗ್ರವಿಚಾರಣಪ್ರಕರಣೇ-ಮಹಿಮೆಯನ್ನು ವಿಚಾರಿಸುವ ಪ್ರಕರಣದಲ್ಲಿ, ಧಾನಾತುಷಸ್ತೋಮವತ್-ನೆಲ್ಲುಹೊಟ್ಟಿನ ಸಮೂಹಗಳಂತೆ ಇತರ ದೇವತೆಗಳು, ಧೂತಾಃ-ಹಾರಿಹೋಗುವವರನ್ನಾಗಿಯೂ, ತ್ವಾಂ-ನಿನ್ನನ್ನು, ಉತ್ತಮೋತ್ತಮಫಲಂ-ಗಟ್ಟಿ ಕಾಳನ್ನಾಗಿಯೂ, ವಿದುಃ-ತಿಳಿಯುವರು. ಎಂದರೆ ಹಸಿಗೆಯ ವೇಳೆಯಲ್ಲಿ ಧಾನ್ಯಗಳನ್ನು ಗಾಳಿಯಲ್ಲಿ ತೂರುವಾಗ ಜಳ್ಳುಕಾಳುಗಳು ಗಾಳಿಯಲ್ಲಿ ಹಾರಿ, ಗಟ್ಟಿ ಕಾಳುಗಳು ನಿಲ್ಲುವಂತೆ ದೇವರುಗಳ ಮಹಾತ್ಮ್ಯದ ಚರ್ಚೆಯಲ್ಲಿ ಇತರ ದೇವತೆಗಳು ಜಳ್ಳುಗಳಂತೆ ಹೋಗುತ್ತಾರೆ, ನೀನೊಬ್ಬನೇ ಸಾರಭೂತನಾಗಿ ನಿಲ್ಲುತ್ತೀಯೆ ಎಂದು ಭಾವವು.

ಶ್ರೀ ಶಂಕರಭಗವತ್ಪಾದಾಚಾರ್ಯ ವಿರಚಿತವಾದ
ಶಿವಾನಂದಲಹರಿಯು ಸಂಪೂರ್ಣವು.

**ಶಿ ವ ಂ ಭ ವ ತು .**

## ಕನ್ನಡಾಕ್ಷರದ್ದು.

| | | | | | |
|---|---|---|---|---|---|
| ಹಾರ್ಮೋನಿಯಂ ಸ್ವಯಂಬೋಧಿನಿ | | ... | 0 | 12 | 0 |
| ಸಂಗೀತ ಬೋಧನಾಕ್ರಮ | ... | ... | 0 | 13 | 0 |
| ಹಾರ್ಮೋನಿಯಂ ಬೋಧನಾಕ್ರಮ | | .... | 0 | 12 | 0 |
| ಸಂಗೀತಸಮಯಾಸಾರ | ... | ... | | | |
| ಸಂಗೀತ ಪಾರಿಜಾತ (ಹಾಡಿನ ಪುಸ್ತಕ) | | ... | 0 | 6 | 0 |
| ಕಲ್ಯಾಣ ಗೀತಮಂಜರಿ | ,, | ... | 0 | 4 | 0 |
| ಗೀತ ಕುಸುಮಾಕರ | ,, | ... | 0 | 6 | 0 |
| ಕಲ್ಯಾಣ ಗೀತಾವಳಿ | ... | ... | | | |
| ಬಾಲಿಕಾಗೀತ ಮುಕ್ತಾಕಲಾಪ | | ... | | | |
| ಪುರಂದರದಾಸರ ಕೀರ್ತನೆಗಳು I, II, III ನೆ ಭಾಗಗಳು | | | | | |
| ಪ್ರತಿಭಾಗಕ್ಕೆ | ... | ... | 0 | 10 | 0 |

### ಹರಿಕಥೆಗೆ ಉಪಯುಕ್ತವಾದ ಪುಸ್ತಕಗಳು.

| | | | | | |
|---|---|---|---|---|---|
| ಧ್ರುವಾಖ್ಯಾನ | ... | ... | 0 | 4 | 0 |
| ಗಣಪತೀ ಸ್ವಯಂವರ | ... | ... | 0 | 4 | 0 |
| ಅನಸೂಯಾಖ್ಯಾನ | ... | ... | 0 | 4 | 0 |
| ರಾಸಕ್ರೀಡೆ (ಕಥೆಗಳು) | ... | ... | 0 | 6 | 0 |
| ಭರತನ ಬಂಧು ಪ್ರೇಮ | ... | ... | 0 | 10 | 0 |
| ವೇದಾಂತ ಬಾಲಬೋಧೆ | ... | ... | 0 | 3 | 6 |
| ರಾಮವರ್ಮ | ... | ... | 0 | 4 | 0 |
| ಕಾದಂಬರೀಕಥೆ | ... | ... | 0 | 8 | 0 |
| ರಾಮನಾಮದ ಮಹಿಮೆ | ... | ... | 0 | 5 | 0 |
| ಸನಾತನ ಸತೀಧರ್ಮ | .... | .... | 0 | 6 | 6 |

ಪುಸ್ತಕಗಳ ಧಾರಣೆಯು ಸಮಯೋಚಿತ ಹೆಚ್ಚುಕಡಮೆಯಾಗುತ್ತಲಿರುತ್ತದೆ. ಅಡ್ವಾನ್ಸು ಇಲ್ಲದೆ ವಿ. ಪಿ. ಮಾಡುವದಿಲ್ಲ:

**ಹೆಚ್. ಎಸ್. ರಾವ್ ಅಂಡ್ ಬ್ರದರ್ಸ್,**

ಚಿಕ್ಕಪೇಟೆ, ಬೆಂಗಳೂರು ಸಿಟಿ.

*

## ಸುಲಭ ಕ್ರಯ ಕಥೆ ಪುಸ್ತಕಗಳು ಬಹಳ ಉಪಯೋಗ.

| | | | | | |
|---|---|---|---|---|---|
| ಸತೀಸಂಯುಕ್ತೆ | ... | ... | 0 | 2 | 0 |
| ಭಗೀರಥ | ... | ... | 0 | 2 | 0 |
| ಶ್ರೀ ತುಕಾರಾಂ ಸಾಧು | ... | ... | 0 | 2 | 0 |
| ಅಕ್ಬರ್ ಮಹಾಶಯ | ... | ... | 0 | 2 | 0 |
| ಈಶ್ವರ ಚಂದ್ರ ವಿದ್ಯಾಸಾಗರ | ... | ... | 0 | 2 | 0 |
| ಶ್ರೀ ದಾಕ್ಷಾಯಣಿದೇವಿ | ... | ... | 0 | 2 | 0 |
| ಸ್ವಾಮಿ ದಯಾನಂದ ಸರಸ್ವತಿ | ... | ... | 0 | 2 | 0 |
| ಅಂಬರೀಷ | ... | ... | 0 | 2 | 0 |
| ಸಮರ್ಥ ರಾಮದಾಸಸ್ವಾಮಿ | ... | ... | 0 | 2 | 0 |
| ಭೀಮಸೇನ | ... | ... | 0 | 2 | 0 |
| ಶ್ರೀ ವಿದ್ಯಾರಣ್ಯರು | ... | ... | 0 | 2 | 0 |
| ಸರ್. ಕೆ. ಶೇಷಾದ್ರಿ ಅಯ್ಯರ್ | ... | ... | 0 | 2 | 0 |
| ಮಾರ್ಕಂಡೇಯ | ... | ... | 0 | 2 | 0 |
| ಸುಭದ್ರೆ | ... | ... | 0 | 6 | 0 |
| ನವೀನ ಭರತಖಂಡ | ... | ... | 0 | 5 | 0 |
| ಮಹಾಲಕ್ಷ್ಮಿ | ... | ... | 0 | 2 | 0 |
| ವಿಕ್ಟೋರಿಯಾ ಮಹಾರಾಣಿಯವರ ಚರಿತ್ರೆ | | ... | 0 | 2 | 0 |
| ಗ್ಲಾಡಿಸ್ಟನ್‌ರವರ ಮಹಿಮೆ | ... | ... | 0 | 2 | 0 |
| ಜಾರ್ಜುಪಿಯರ್‌ಪಾಂಟ್‌ರವರ ಚರಿತ್ರೆ | | ... | 0 | 2 | 0 |

ವ್ಯಾಪಾರಸ್ಥರಿಗಳಿಗೂ ಲೈಬರಿಗಳಿಗೂ ಕಮಿಷನ್ ಕೊಡಲ್ಪಡುತ್ತೆ ಅಡ್ವಾನ್ಸು ಇಲ್ಲದೆ ವಿ. ಪಿ. ಮಾಡುವದಿಲ್ಲ. ಎಂಟುಪುಸ್ತಕಗಳನ್ನಪೇಕ್ಷಿಸುವವರು ಮುಂಗಡವಾಗಿ ಎಂಟು ಪುಸ್ತಕಗಳ ಕ್ರಯವನ್ನು ಹಾಸಲಿಗೆ -೩-೦ ಆಣೆಯನ್ನು ಕಳಿಸಿಕೊಟ್ಟಲ್ಲಿ ಪುಸ್ತಕಗಳನ್ನು ಪಾರ್ಸಲ್ ಮೂಲಕ ಕಳಿಸಿಕೊಡಲ್ಪಡುತ್ತೆ.

**ವಿಲಾಸ—ಹೆಚ್. ಎನ್. ರಾವ್ ಅಂಡ್ ಬ್ರದರ್ಸ್,**

# ಹಿಮವದ್ಘೃತವು

ತಕ್ಷಣ ಗುಣಕಾರಿ, ಕಜ್ಜಿ, ಮೊಡವೆಗಳು, ಕುರುಗಳ ಹುಣ್ಣುಗಳು, ಘಾಯಗಳು, ಉಳಕಡ್ಡಿ, ಮೂಲವ್ಯಾಧಿ, ಕೋ ಕಚ್ಚುವದು, ಚೇಂಕಿ ತಗಲುವದು, ಮೊದಲಾದ್ದಕ್ಕೆ ಉಪಯೋ ಸುವದು, ಕೆಟ್ಟ ವಾಸನೆ ಇಲ್ಲ ಬಟ್ಟೆ ಕೆಡುವುದಿಲ್ಲ. ನೋ ಬಂದಾಗೆಲ್ಲ ಹಚ್ಚಬಹುದು. ಚರ್ಮ ವ್ಯಾಧಿಗಳಿಗೆಲ್ಲಾ ಉಪಯೋ ಸಬಹುದು. ಮಂಜಿನೋಪಾದಿ ತಣ್ಣಗಿರುತ್ತೆ.

ಹಾಸಲು 0—2—0· ಕ್ರಯ 0—8—0.

ಅಪೇಕ್ಷಿಸುವವರು 0–10–0 ಯನ್ನು ಮುಂಗಡವಾಗಿ ಕಳಿಸಿದ ಒಂದು ಸೀಸೆಯನ್ನು ಬಾಂಗಿ ಮೂಲಕ ಕಳಿಸುತ್ತೇವೆ. ಮೂರು ಗಿ ವರಿಗೂ ಭಾಂಗಿ ಹಾಸಲು 0–2–0 ಆಣೆ.

## ಹಾರ್ಮೋನಿಯಂ ಸ್ವಯಂಬೋಧಿನೀ.

ನಾಲ್ಕನೆಯ ಛಾಪೆ.

ಈ ಪುಸ್ತಕದಲ್ಲಿ ಹಾರ್ಮೋನಿಯಂ ವಾದ್ಯದ ನಕ್ಷೆಯೂ ಅದನ್ನು ಬೋಧಕರ ಸಹಾಯವಿಲ್ಲದೆ ಉಪಯೋಗಿಸುವ ವಿಧಾನವೂ ಮತ್ತು ಎಲ್ಲರ ಲ್ಲಿಯೂ ಬಳಿಕೆಯಲ್ಲಿರುವ ಪುರಂದರದಾಸರ ಕೀರ್ತನೆಗಳೂ, ಸುಲಭವಾದ ನಾಟಕದ ಮಟ್ಟುಗಳಲ್ಲಿ ನೂತನವಾಗಿ ರಚಿಸಲ್ಪಟ್ಟಿರುವ ದೇವರ ನಾಮ ಗಳೂ ಸ್ವರ ಸಹಿತ ಕೊಟ್ಟಿರುತ್ತದೆ. ಇದಲ್ಲದೆ ಶಾಸ್ತ್ರರೀತಿಯಾಗಿ ಸಂಗೀ ಕಲಿಯುವವರಿಗೆ ಅನುಕೂಲವಾಗಿರುವಂತೆ ಸರಳೆ, ಜಂಟಿ ವರಸೆಗಳು, ಅಲಂಕಾರಗಳು, ಸ್ವರಜತಿಗಳು, ವರ್ಣಗಳು, ತ್ಯಾಗಯ್ಯರ್, ಪಟ್ಣಂ ಸುಬ್ರಹ್ಮಣ್ಯಾಯ್ಯರ್ ಇವರುಗಳಿಂದ ರಚಿತವಾದ ತೆಲುಗು ಕೀರ್ತನೆಗಳು ಸ ಸ್ವರಸಹಿತ ಕೊಟ್ಟಿರುತ್ತದೆ. ಈ ಛಾಪೆಯಲ್ಲಿ ಎರಡನೆ ಛಾಪೆಗಿಂತ ಹೆಚ್ಚಾ ಕೆಲವು ಕೀರ್ತನೆಗಳಿವೆ. ಪುಟಗಳು 95.

ಹಾಸಲು ಸಹಿತ 0–14–0 ಆಣೆಯನ್ನು ಮುಂಗಡವಾಗಿ ಕಳಿಸಿದ ಪುಸ್ತಕವನ್ನು ಪಾರ್ಸಲ್ ಮೂಲಕ ಕಳಿಸಲ್ಪಡುತ್ತೆ. ವಿ. ಪಿ. ಯಾಗಿ ಕಳಿಸುವುದಿಲ್ಲ. ಬೆಲೆ 12 ಆಣೆ.

**ಎಚ್. ಎಸ್. ರಾವ್ ಬ್ರದರ್ಸ್, ಚಿಕ್ಕಪೇಟೆ, ಬೆಂಗಳೂರು ಸಿಟಿ.**